ಮಾಡಲಾಗಿ ಮೂರು ಪ್ಲಾಸ್ಟಿಕ್ ಚೀಲಗಳಲ್ಲಿ ಒಟ್ಟು 100 ಎಂ.ಎಲ್. ನ 870 ಸಾರಾಯಿ ಪ್ಯಾಕೇಟು (87.000 ಲೀ.) ಗಳಿರುವುದು ಕಂಡು ಬಂದಿರುತ್ತದೆ. ಸದರಿ ಕೃತ್ಯಕ್ಕೆ ಬಳಸಿದ ಜೀಪು ಮಹೀಂದ್ರ ಕಂಪನಿಯದಾಗಿದ್ದು ನಂ: MYZ - 9528, ಇಂಜಿನ್ ನಂ: D.H. 05025 ಆಗಿರುವುದಾಗಿ ತಿಳಿಸಿರುತ್ತಾರೆ. ಓಡಿ ಹೋದ ಆಸಾಮಿಯ ಹೆಸರು ವಿಳಾಸ ತಿಳಿದು ಬಾರದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಪಂಚರ ಸಮಕ್ಷಮ ರಾಸಾಯನಿಕ ಮಾದರಿಗಾಗಿ 100 ಎಂ.ಎಲ್. ನ 3 ಸಾರಾಯಿ ಪ್ಯಾಕೇಟುಗಳನ್ನು ಮಾದರಿಯಾಗಿ ತೆಗೆದು ಅದಕ್ಕೆ ಬಟ್ಟೆ ಕಟ್ಟಿ ಇಲಾಖೆಯ ಸೀಲಿನಿಂದ ಸೀಲು ಮಾಡಿ ಸ್ಥಳದಲ್ಲಿ ಮಾದರಿ ಮೊಹರು ತಯಾರಿಸಿ ಚೀಟಿಯನ್ನು ಬರೆದು ಪಂಚರು ಮತ್ತು ಇಲಾಖಾಧಿಕಾರಿಗಳು ರುಜು ಮಾಡಿ ಸ್ಯಾಂಪಲ್ ಪ್ಯಾಕೇಟಿಗೂ ಪ್ಲಾಸ್ಟಿಕ್ ಚೀಲಕ್ಕೂ ಅಂಟಿಸಿ ಸ್ಥಳದಲ್ಲೇ ಮಹಜರು ತಯಾರಿಸಿ ದೊರೆತ ಸಾರಾಯಿ ಪ್ಯಾಕೇಟುಗಳನ್ನು ವಾಹನ ಸಮೇತ ಇಲಾಖೆಗೆ ವಶಪಡಿಸಿಕೊಂಡು ಕಛೇರಿಗೆ ಬಂದು ಅಬಕಾರಿ ಕಾಯ್ದೆ 1965 ರ ಕಲಂ 11, R/W, 14, 34, 43 (A) ರ ಪ್ರಕಾರ ಮೊಕದ್ದಮೆಯನ್ನು ಮೊಕದ್ದಮೆ ಸಂ: 14/2003-04ರ ಮೂಲಕ ದಾಖಲು ಪಡಿಸಿ ಪ್ರಥಮ ಮಾಹಿತಿ ವರದಿಯನ್ನು ಮತ್ತು ಮಹಜರನ್ನು ನ್ಯಾಯಾಲಯಕ್ಕೂ ಮತ್ತು ಈ ಪ್ರಾಧಿಕಾರಕ್ಕೂ ಸಲ್ಲಿಸಿರುತ್ತಾರೆ. ಈ ಪ್ರಾಧಿಕಾರದ ಅನುಮತಿಯಂತೆ ಮೊಕದ್ದಮೆಯನ್ನು ಸ್ವತ್ತುಗಳೊಂದಿಗೆ ಅಬಕಾರಿ ಉಪ ನಿರೀಕ್ಷಕರು, ಉಪ ವಲಯ, ವಿರಾಜಪೇಟೆ ಇವರಿಗೆ ಹಸ್ತಾಂತರಿಸಿರುತ್ತಾರೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನಕ್ಕೆ ಸಂಬಂಧಿಸಿದಂತೆ ದಿ: 4.3.04 ರಂದು ವಾಹನದ ಮಾಲೀಕರಾದ ಶ್ರೀ ಸಿ.ಸುಬ್ಬಯ್ಯ ತಂದೆ ಚಿಣ್ಣಪ್ಪ, ಹೊಸೂರು ಗ್ರಾಮ, ವಿರಾಜಪೇಟೆ ತಾಲ್ಲೂಕು ಇವರಿಂದ ಅಧಿಕೃತ ಹಕ್ಕು ಪತ್ರ ಪಡೆದವರಾದ ಶ್ರೀ ಅಶ್ರಫ್ ತಂದೆ ಅಬ್ದುಲ್ ಖಾದರ್, ಧನುಗಾಲ ಗ್ರಾಮ, ಕೋಣನಕಟ್ಟೆ, ವಿರಾಜಪೇಟೆ ತಾಲ್ಲೂಕು ಇವರು ಇವರ ಪರ ವಕೀಲರಾದ ಶ್ರೀ ಶ್ರೀನಿವಾಸ್ ಪ್ರಸಾದ್, ವಿರಾಜಪೇಟೆ ಇವರಿಂದ ಆರ್.ಸಿ. ಪುಸ್ತಕದ ಜೆರಾಕ್ಸ್ ಪ್ರತಿಯನ್ನು ಲಗತ್ತಿಸಿ ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ವಾಹನವನ್ನು ವಾಹನದ ಮಧ್ಯಂತರ ಬಿಡುಗಡೆಗೆ ಕೋರಿರುತ್ತಾರೆ. ವಶಪಡಿಸಿಕೊಂಡ ಸಾರಾಯಿಗೆ ಸಂಬಂಧಿಸಿ ಯಾವುದೇ ಕೋರಿಕೆ ಸಲ್ಲಿಸಿರುವುದಿಲ್ಲ.

ಆರ್.ಸಿ. ಪುಸ್ತಕದಲ್ಲಿ ನಮೂದಿಸಿದಂತೆ ಶ್ರೀ ಅಶ್ರಫ್ ರವರೇ ವಾಹನದ ಮಾಲೀಕರೆಂದು ತಿಳಿದು ಅವರಿಗೆ ದಿ: 4.3.04 ರಂದು 43 ಬಿ ರೀತ್ಯಾ ಕಾರಣ ಕೇಳಿ ನೋಟೀಸನ್ನು ನೀಡಲಾಯಿತು. ಸದರಿ ನೋಟೀಸನ್ನು ಅಶ್ರಫ್ ರವರು ಸಹಿ ಮಾಡಿ ಪಡೆದುಕೊಂಡಿರುತ್ತಾರೆ.

ಸದರಿ ವಾಹನದ ಅಧಿಕೃತ ಮಾಲೀಕರು ಯಾರೆಂಬುವುದನ್ನು ದೃಢಪಡಿಸಿಕೊಳ್ಳಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ರವರಿಗೆ ದಿ: 23.2.04 ರಂದು ಪತ್ರ ಬರೆದು ಅವರಿಂದ ದಿ: 20.4.04 ರಂದು ಬಿ ಎಕ್ಸ್‌ಟ್ರಾಕ್ಟ್ ಅನ್ನು ಪಡೆಯಲಾಯಿತು. ಬಿ. ಎಕ್ಸ್‌ಟ್ರಾಕ್ಟ್ ನಲ್ಲಿದ್ದಂತೆ ದಿ: 15.2.02 ರಿಂದ ಶ್ರೀ ಕೆ. ಅಶ್ರಫ್ ತಂದೆ ಅಬ್ದುಲ್ ಖಾದರ್, ಧನುಗಾಲ ಗ್ರಾಮ, ಕೋಣನಕಟ್ಟೆ, ವಿರಾಜಪೇಟೆ ತಾಲ್ಲೂಕು ಎಂದು ದೃಢಪಡಿಸಿಕೊಳ್ಳಲಾಯಿತು.

ತದ ನಂತರ ವಾಹನದ ಮಾಲೀಕರ ಅರ್ಜಿಯನ್ನು ಈ ಪ್ರಾಧಿಕಾರದಲ್ಲಿ ಪರಿಗಣಿಸಿ ವಾಹನಕ್ಕೆ ಮೌಲ್ಯವನ್ನು ನಿಗದಿಪಡಿಸಲು ನಿರ್ಧರಿಸಿ ದಿ: 29.7.2004 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಪತ್ರ ಬರೆದು ಜೀಪ್ ನಂ: MYZ - 9528, ರ ವಾಹನಕ್ಕೆ ಇಂದಿನ ಮಾರ್ಕೆಟ್ ಮೌಲ್ಯವನ್ನು ನಿಗದಿಪಡಿಸಲು ಕೋರಲಾಗಿತ್ತು. ಅದರಂತೆ ಸದರಿಯವರು ಪರಿಶೀಲಿಸಿ ರೂ. 32,000/ - (ಮೂವತ್ತೆರಡು ಸಾವಿರ ರೂಪಾಯಿಗಳು) ಎಂದು ನಿಗದಿಪಡಿಸಿ ದಿ: 1.10.2004 ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ 100 ಎಂ.ಎಲ್. ನ 870 ಸಾರಾಯಿ ಪ್ಯಾಕೇಟುಗಳಿಂದ ತೆಗೆದ ಮಾದರಿಯನ್ನು ದಿ: 7.8.04 ರಂದು ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ವಿಭಾಗ, ಮಂಗಳೂರು ಇವರಿಗೆ ಕಳುಹಿಸಲಾಗಿದ್ದು ಅವರ ವರದಿ ಸಂ: ಬಿ 724-3 ದಿ: 27.11.04 ರಲ್ಲಿ ಸಾರಾಯಿಯಲ್ಲಿ ಮದ್ಯಸಾರದ ಪ್ರಮಾಣ 22.0 % ಇರುವುದಾಗಿ ಇದು ಸಾರಾಯಿ ಎಂದು ದೃಢಪಟ್ಟಿರುತ್ತದೆ. ಹಾಗೂ ಸದರಿ ಸಾರಾಯಿಯು ಅಧಿಕೃತ ಡಿಸ್ಟಿಲರಿಗಳಿಂದ ತಯಾರಾದ ಬಗ್ಗೆ ಯಾವುದೇ ದಾಖಲಾತಿಗಳು ಇಲ್ಲದ್ದರಿಂದ ಮತ್ತು ಸದರಿ ಸಾರಾಯಿಯನ್ನು ಸಾರ್ವಜನಿಕರಿಗೆ ವಿತರಿಸಿದಲ್ಲಿ ಪ್ರಾಣಾಪಾಯವಾಗುವ ಸಂಭವವಿರುವುದರಿಂದ ಗ್ರಾಹಕರಿಗೆ ವಿತರಿಸುವುದು ಕಷ್ಟಸಾಧ್ಯವಾದುದರಿಂದ ಮತ್ತು ವಶಪಡಿಸಿಕೊಂಡ ಸಾರಾಯಿಯು ತನಗೆ ಸೇರಿದ್ದೆಂದು ಶ್ರೀ ಅಶ್ರಫ್ ರವರ ಅರ್ಜಿಯಲ್ಲಿ ನಮೂದಿಸಿಲ್ಲವಾದ್ದರಿಂದ ಸದರಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ದಿ: 28.10.05 ರಂದು ಆದೇಶ ನೀಡಲಾಗಿರುತ್ತದೆ.

ದಿ: 4.3.04 ರಂದು ಅರ್ಜಿ ಸಲ್ಲಿಸಿ ಮಧ್ಯಂತರ ಬಿಡುಗಡೆಗೆ ಕೋರಿದ ವಕೀಲರಾಗಲೀ ಅಥವಾ ವಾಹನಕ್ಕೆ ಸಂಬಂಧಿಸಿದ ಶ್ರೀ ಅಶ್ರಫ್ ರವರಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಇವರಿಗೆ ವಾಹನವನ್ನು ಬ್ಯಾಂಕ್ ಗ್ಯಾರಂಟಿಯಲ್ಲಿ ಬಿಡುಗಡೆಗೊಳಿಸುವ ಬಗ್ಗೆ ಪ್ರಾಧಿಕಾರದಲ್ಲಿ ನಿರ್ಧರಿಸಲು ವಿಚಾರಣೆಯ ದಿನಾಂಕವನ್ನು ನಿಗದಿಪಡಿಸಿ ಹಲವಾರು ಬಾರಿ ಸಮನ್ಸ್ ನೀಡಲಾದರೂ ಸಂಬಂಧಪಟ್ಟವರು ಹಾಜರಾಗಲಿಲ್ಲ. ಆದ್ದರಿಂದ ಅಂತಿಮವಾಗಿ ದಿ: 20.2.06 ರಂದು ನೋಟೀಸನ್ನು ಒಂದನೆಯದಾಗಿ ವಾಹನದ ಮಾಲೀಕರಾದ ಶ್ರೀ ಸುಬ್ಬಯ್ಯ ತಂದೆ ಚಿಣ್ಣಪ್ಪ, ಹೊಸೂರು ಗ್ರಾಮ, ವಿರಾಜಪೇಟೆ ತಾಲ್ಲೂಕು ಇವರಿಗೆ ಮತ್ತು ಎರಡನೆಯದಾಗಿ ಶ್ರೀ ಸುಬ್ಬಯ್ಯ ರವರಿಂದ ಅಧಿಕೃತ ಹಕ್ಕು ಪತ್ರ ಹೊಂದಿದವರಾದ ಶ್ರೀ ಅಶ್ರಫ್, ತಂದೆ ಅಬ್ದುಲ್ಲಾ, ಧನುಗಾಲ ಗ್ರಾಮ, ಕೋಣಾನಕಟ್ಟೆ, ವಿರಾಜಪೇಟೆ ತಾಲ್ಲೂಕು ಇವರಿಗೂ ನೋಂದಣಿ ಅಂಚೆಯ ಮೂಲಕ ನೋಟೀಸ್ ನೀಡಿ ದಿ: 16.3.06 ರಂದು ನಡೆಯುವ ವಿಚಾರಣೆಗೆ ಹಾಜರಾಗಲು ಹಾಗೂ ವಾಹನಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿಗದಿಪಡಿಸಿದ ಮೌಲ್ಯ ರೂ. 32000/ - ಗಳಿಗೆ ಸಮನಾದ ಬ್ಯಾಂಕ್ ಗ್ಯಾರಂಟಿಯನ್ನು ಹಾಜರುಪಡಿಸಿದಲ್ಲಿ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾಗುವುದು ಎಂದು ತಪ್ಪಿದಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಾಗಿ ತಿಳುವಳಿಕೆ ನೀಡಿ ನೋಂದಣಿ ಅಂಚೆಯ ಮೂಲಕ ಪತ್ರವನ್ನು ರವಾನಿಸಲಾಗಿತ್ತು. ಸದರಿ ಪತ್ರ ಶ್ರೀ ಸುಬ್ಬಯ್ಯರವರಿಗೆ ತಲುಪದೆ ವಾಪಸ್ ಬಂದಿರುತ್ತದೆ, ಹಾಗೂ ಶ್ರೀ ಅಶ್ರಫ್ ರವರು ಪಡೆದುಕೊಂಡಿದ್ದು ಅವರು ಪಡೆದುಕೊಂಡ ಬಗ್ಗೆ ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ತಲುಪಿರುತ್ತದೆ.

ಸದರಿ ವಿಚಾರಣೆಯ ದಿನಾಂಕದಂದು ಮುಖ್ಯ ಮಹಜರ್ ಸಾಕ್ಷಿಗಳಾದ ಶ್ರೀ ಚಂದ್ರಶೇಖರ್, ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸಂ: 1, ವಿರಾಜಪೇಟೆ ಇವರಿಗೂ, ಶ್ರೀ ವಿ.ಎಸ್. ಸೋಮಯ್ಯ, ಅಬಕಾರಿ ರಕ್ಷಕ, ಜಾರಿ ಮತ್ತು ತನಿಖೆ, ವಿರಾಜಪೇಟೆ ಮತ್ತು ಸಿ.ಎಲ್. ಚಂದ್ರೇಗೌಡ ಮತ್ತು ಎಂ. ಸುಧಾಕರ, ವಿರಾಜಪೇಟೆ ಇವರುಗಳಿಗೆ ನೋಟೀಸ್ ನೀಡಿ ವಿಚಾರಣೆಗೆ ಹಾಜರಾಗಲು ಸೂಚಿಸಲಾಗಿತ್ತು. ಈ ಪ್ರಾಧಿಕಾರದ ಮುಂದೆ ಹಾಜರಾದ ಪಿ.ಡಬ್ಲ್ಯೂ -1 ಇವರನ್ನು ಮಾನ್ಯ ಎ.ಡಿ.ಪಿ. ಯವರಿಂದ ಮುಖ್ಯ ವಿಚಾರಣೆ ಮಾಡಲಾಯಿತು.

**ಪಿ.ಡಬ್ಲ್ಯೂ -1:**

ಶ್ರೀ ಚಂದ್ರಶೇಖರ್, ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವೀರಾಜಪೇಟೆ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು ಅವರು ದಿ: 16.3.06 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಿಚಾರಣೆಯನ್ನು ಮಾಡಲಾಯಿತು. ತಾನು ದಿ: 19.2.2004 ರಂದು ರಾತ್ರಿ 8-00 ಗಂಟೆಗೆ ವಿರಾಜಪೇಟೆ - ಗೋಣಿಕೊಪ್ಪ ಮಾರ್ಗದ ಮಧ್ಯವಿರುವ ಹಾತುರು ಎಂಬಲ್ಲಿ ಸಂಚಾರ ಮಾಡುತ್ತಿದ್ದಾಗ ಗೋಣಿಕೊಪ್ಪದ ಕಡೆಗೆ ತಿರುಗಿ ಮಾರ್ಗದ ಎಡಭಾಗದಲ್ಲಿ ಒಂದು ವಾಹನ ನಿಂತಿರುವುದು ಕಂಡು ಬಂದಿತು. ಸದರಿ ವಾಹನ ಜೀಪಾಗಿದ್ದು ನಾವು ಹತ್ತಿರ ತಲುಪಿದಂತೆ ಈ ವಾಹನದಿಂದ ಒಬ್ಬ ವ್ಯಕ್ತಿಯು ನಮ್ಮನ್ನು ಕಂಡು ಕೂಡಲೇ ವಾಹನದಿಂದ ಹಾರಿ ಕತ್ತಲೆಯಲ್ಲಿ ಓಡಿ ಹೋದನು. ಅವನನ್ನು ಹಿಡಿಯಲು ನಾವು ಹಿಂಬಾಲಿಸಿದಾಗ್ಯೂ ಕೈ ತಪ್ಪಿ ಓಡಿ ಹೋದನು ನಂತರ ನಿಲುಗಡೆಗೊಂಡಿದ್ದ ಜೀಪನ್ನು ಪರಿಶೀಲಿಸಿದೆವು. ಸದರಿ ವಾಹನಕ್ಕೆ ನೋಂದಣಿ ಸಂಖ್ಯೆ ಇದ್ದು ಅದರ ನಂಬರು : MYZ - 9528, ಮಹೇಂದ್ರ ಜೀಪು ಎಂಬುದಾಗಿತ್ತು. ನಾವು ಸದರಿ ವಾಹನವನ್ನು ಶೋಧಿಸುವ ಬಗ್ಗೆ ಸ್ಥಳದಲ್ಲಿ ನಡೆದು ಹೋಗುತ್ತಿದ್ದ ಇವರು ಪಂಚರನ್ನು ಬರ ಮಾಡಿಕೊಂಡು ಅವರಿಗೆ ಸದರಿ ವಾಹನವನ್ನು ಶೋಧಿಸಬೇಕಾಗಿದೆ ಎಂಬುದಾಗಿ ತಿಳಿಸಿ ವಾಹನವನ್ನು ಶೋಧಿಸಿದ್ದೇವೆ. ಸದರಿ ವಾಹನದಲ್ಲಿ ಚಾಲಕ ಕುಳಿತುಕೊಳ್ಳುವ ಸೀಟಿನ ಹಿಂಬದಿಯಲ್ಲಿ ಮೂರು ಪ್ಲಾಸ್ಟಿಕ್ ಚೀಲಗಳು ಸಾರಾಯಿ ಪ್ಯಾಕೆಟ್ ತುಂಬಿಸಿ ಇರಿಸಿರುವುದನ್ನು ಪತ್ತೆ ಹಚ್ಚಿದೆವು.

ಸದರಿ ಮೂರು ಪ್ಲಾಸ್ಟಿಕ್ ಚೀಲಗಳನ್ನು ಬಿಚ್ಚಿ ಪರಿಶೀಲಿಸಲಾಗಿ 180 ಮಿಲಿಯ ಸಾರಾಯಿ ತುಂಬಿದ ಒಟ್ಟು 870 ಸಾರಾಯಿ ಪ್ಯಾಕೇಟುಗಳು ಅಕ್ರಮವಾಗಿ ಸಾಗಿಸಲಾಗುತ್ತಿದ್ದುದು ಕಂಡು ಬಂತು. ನಂತರ ಸದರಿ ಸಾರಾಯಿ ಪ್ಯಾಕೇಟುಗಳ ಪೈಕಿ 100 ಎಂ.ಎಲ್. ನ 3 ಮಾದರಿಯನ್ನಾಗಿ ತೆಗೆದು ಸದರಿ ಮಾದರಿಗಳಿಗೆ ಬಟ್ಟೆಯಿಂದ ಸುತ್ತಿ ದಾರ ಕಟ್ಟಿ ಗುರುತು ಚೀಟಿ ತಯಾರಿಸಿ ಇಲಾಖೆಯ ಸೀಲು ಹಾಕಲಾಯಿತು. ಇದು ಅಕ್ರಮವಾಗಿ ರಹದಾರಿ ಇಲ್ಲದೆ ಸಾಗಿಸಲು ವ್ಯವಸ್ಥಿತವಾಗಿ ಪ್ರಯತ್ನಿಸಲಾಗಿರುವ ಪ್ರಕರಣವೆಂದು ಪರಿಗಣಿಸಿ ಒದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11 ಮತ್ತು 14 ರಂತೆ ಅಪರಾಧ ಹಾಗೂ 32, 34 ರಂತೆ 43 ಎ ರೀತ್ಯಾ ಶಿಕ್ಷಾರ್ಹ ಅಪರಾಧವಾದುದರಿಂದ ಸದರಿ ವಾಹನ ಜೀಪ್ ನಂ: MYZ - 9528, ನ್ನು ಹಾಗೂ ಮೂರು ಪ್ಲಾಸ್ಟಿಕ್ ಚೀಲಗಳಲ್ಲಿ ಸಾಗಿಸಲಾಗುತ್ತಿದ್ದ 100 ಎಂ.ಎಲ್. ನ 870 ಸಾರಾಯಿ ಪ್ಯಾಕೇಟುಗಳನ್ನು ಮಹಜರು ತಯಾರಿಸಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಯಿತು.

ಈ ಬಗ್ಗೆ ಮೊ ಸಂ: 14/2003-04 ರಂತೆ ಪ್ರಕರಣವನ್ನು ದಾಖಲಿಸಿಕೊಳ್ಳಲಾಯಿತು. ನಂತರ ಮೊಕದ್ದಮೆಯ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಇಲಾಖಾ ಮೇಲಾಧಿಕಾರಿಯವರ ಕಛೇರಿಗೂ ಮತ್ತು ಅಧಿಕೃತ ಅಧಿಕಾರಿಗಳ ನ್ಯಾಯಾಲಯಕ್ಕೆ ದಿ: 20.2.2004 ರಂದು ಒಪ್ಪಿಸಲಾಯಿತು. ಈ ಪ್ರಕರಣದ ಮುಂದಿನ ತನಿಖೆಯನ್ನು ಜರುಗಿಸಲು ದಾಖಲೆಯಾದ ಸ್ವತ್ತುಗಳನ್ನು ಅಬಕಾರಿ ಉಪ ನಿರೀಕ್ಷಕರು, ವಿರಾಜಪೇಟೆ ಉಪ ವಲಯ ಇವರಿಗೆ ಹಸ್ತಾಂತರಿಸಲಾಯ್ತು.

ವಿರಾಜಪೇಟೆ ಉಪ ವಲಯದ ಅಬಕಾರಿ ಉಪ ನಿರೀಕ್ಷಕರ ಹುದ್ದೆಯ ಪ್ರಭಾರವನ್ನು ನಾನೇ ವಹಿಸಿಕೊಂಡಿದ್ದು ಈ ಪ್ರಕರಣದ ಮುಂದಿನ ತನಿಖೆಯನ್ನು ಕೈಗೊಂಡಿರುತ್ತೇನೆ. ಪ್ರಕರಣಕ್ಕೆ ಸಂಬಂಧಿಸಿದ 100 ಎಂ.ಎಲ್.ನ ಮೂರು ಸಾರಾಯಿ ಪ್ಯಾಕೇಟ್ ಮಾದರಿಗಳನ್ನು ದಿ: 7.8.04 ರಂದು ಸರ್ಕಾರದ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಗೆ ಕಛೇರಿಯ ಅಬಕಾರಿ ರಕ್ಷಕರಾದ ಶ್ರೀ ಮೋಹನ್ ಇವರ ಮುಖಾಂತರ ಕಳುಹಿಸಿ ಕೊಟ್ಟು ದಿ: 27.11.04 ರಂದು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಂದ ವರದಿ ಸಂ: 724-3 ರಂತೆ ವಿಶ್ಲೇಷಣಾ ವರದಿಯನ್ನು ಪಡೆದುಕೊಂಡೆನು. ನಂತರ ವಶಪಡಿಸಿಕೊಂಡ ಸ್ವತ್ತುಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ದಿ: 1.12.04 ರಲ್ಲಿ ರಾಸಾಯನಿಕ ವರದಿಯ ಪ್ರತಿ ಒಪ್ಪಿಸಿದೆವು.

ತನಿಖೆಯ ಸಂದರ್ಭದಲ್ಲಿ ಪ್ರಕರಣಕ್ಕೆ ಸಂಬಂಧಿಸಿದ ಆರೋಪಿಗಳು ಪತ್ತೆಯಾಗಿರುವುದಿಲ್ಲ.

ಮುಂದಿನ ತನಿಖೆಯ ಸಂದರ್ಭದಲ್ಲಿ ಆರೋಪಿಯು ಯಾರೂ ಪತ್ತೆಯಾಗಿರುವುದಿಲ್ಲ. ಆರೋಪಿಯು ಸಿಕ್ಕಿರುವುದಿಲ್ಲ.

ನಂತರ ಈ ಮೊಕದ್ದಮೆಯ ಕುರಿತು ಆರೋಪಿಗಳಾದ ವಾಹನದ ಮಾಲೀಕರು ಅಥವಾ ವಾಹನದ ಚಾಲಕ ಹಾಜರಿಲ್ಲದ ಕಾರಣ ಇವರ ಕಡೆಯಿಂದ ಯಾವುದೇ ಪಾರ್ಟಿ ಸವಾಲು ಇರಲಿಲ್ಲ.

ಆದುದರಿಂದ ಪಿ.ಡಬ್ಲ್ಯೂ -1 ಇವರು ಈ ನ್ಯಾಯಾಲಯದಲ್ಲಿ ನೀಡಲಾದ ಸಾಕ್ಷಿಯನ್ನು ಗಣನೆಗೆ ತೆಗೆದುಕೊಂಡು ಜೀಪ್ ಸಂ: MYZ - 9528 ರಲ್ಲಿ ಅನಧಿಕೃತವಾಗಿ 870 (87.000 ಲೀ.) ಸಾರಾಯಿ ಪ್ಯಾಕೇಟುಗಳನ್ನು ಅಕ್ರಮ ಸಾಗಾಟ ಮಾಡಲಾಗಿರುವುದು ಸಾಬೀತು ಆಗಿರುವುದರಿಂದ ಮತ್ತು ಸದರಿ ಜಪ್ತು ಮಾಡಲಾದ ಜೀಪ್ ಸಂ: MYZ - 9528 ರಲ್ಲಿ ಅನಧಿಕೃತವಾಗಿ ಸಾರಾಯಿ ಸಾಗಾಟ ಮಾಡುವುದನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 11, R/W, 14, 34, 43 (A) ರ ಪ್ರಕಾರ ಶಿಕ್ಷಾರ್ಹ ಆಗಿರುವುದರಿಂದ ನೀಲಿ ಬಣ್ಣದ ಜೀಪ್ ಸಂ: MYZ - 9528 ನ್ನು ಅನಧಿಕೃತವಾಗಿ ಸಾರಾಯಿ ಸಾಗಾಟ ಮಾಡಲು ಬಳಸಿದ ಕಾರಣಕ್ಕೆ ಸದರಿ ಜೀಪನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ಸಾಕ್ಷಿಗಳ ಹೇಳಿಕೆ ಆಧಾರದ ಮೇಲೆ ಅಭಿಪ್ರಾಯಪಟ್ಟು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ, ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ರ ಕಲಂ 43(ಎ) ನಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ) ರನ್ವಯ ಅನುಸರಿಸಬೇಕಾದ ಎಲ್ಲಾ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43 (ಸಿ) ಅನ್ವಯ ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ಇವರ ಮೊಕದ್ದಮೆ ಸಂ: 14 / 2003-04, ದಿ: 19.2.04 ರಲ್ಲಿ ಜಪ್ತು ಮಾಡಿಕೊಳ್ಳಲಾದ ವಾಹನ ಜೀಪ್ ನಂ: MYZ - 9528 ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶ ಇಂದು ಅಂದರೆ ದಿ: 29.3.06 ರಂದು ಉಕ್ತಲೇಖನ ಕೊಟ್ಟು ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,
ಕೊಡಗು ಜಿಲ್ಲೆ, ಮಡಿಕೇರಿ.

ಅನುಬಂಧ - 1

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

**ಪ್ರಾ.ಸಾ. 1: ಶ್ರೀ ಚಂದ್ರಶೇಖರ್, ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ.**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು

ನಿಶಾನೆ ಪಿ. -1 : ಮಹಜರಿನ ಛಾಯಾ ಪ್ರತಿ.

ನಿಶಾನೆ ಪಿ. -2 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ. -3 : ರಾಸಾಯನಿಕ ಪರಿಶೀಲನೆಗೆ ಕಳುಹಿಸಿದ ಕೋರಿಕೆ ಪತ್ರ

ನಿಶಾನೆ ಪಿ. -4 : ರಾಸಾಯನಿಕ ತಜ್ಞರ ವರದಿ.

**ಎನ್. ಎಂ. ಹುಸೇನ್**

ಪಿ.ಆರ್. 765

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,
ಕೊಡಗು ಜಿಲ್ಲೆ, ಮಡಿಕೇರಿ.

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ನ್ಯಾಯಾಲಯ**

**ಭದ್ರಾವತಿ ವಿಭಾಗ ಭದ್ರಾವತಿ**

**ಸಂಖ್ಯೆ: ಎಫ್‌ಓಸಿ.ಸಿಓಎನ್. ಸಿಆರ್ 1 / 05-06, ದಿನಾಂಕ: 22ನೇ ಮಾರ್ಚ್ 2006**

**ನಿರೂಪಣಾಧಿಕಾರಿ** : ಶ್ರೀಮತಿ ಎ. ರಾಧಾದೇವಿ ಭಾಅಸೇ.,
ಅಧಿಕಾರಿಯುತ ಅಧಿಕಾರಿಗಳು ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ
ಭದ್ರಾವತಿ ವಿಭಾಗ, ಭದ್ರಾವತಿ

**ಫಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಚನ್ನಗಿರಿ ವಲಯ, ಚನ್ನಗಿರಿ

**ಅರ್ಜಿದಾರರು** : ಶ್ರೀ ಕೆ. ಮಂಜಪ್ಪ ಬಿನ್ ಕರಿಯಪ್ಪ ಇವರ ಜಿಪಿಎ
ಜಿ. ವಿಜೇಂದ್ರ ಬಿನ್ ಲೇಟ್ ಗೋವಿಂದಪ್ಪ, ಅರಳಿಹಳ್ಳಿ,
ಭದ್ರಾವತಿ ತಾಲ್ಲೂಕು.

**ಪ್ರಕರಣದ ಹಿನ್ನೆಲೆ**

ಭದ್ರಾವತಿ ವಿಭಾಗ, ಚನ್ನಗಿರಿ ವಲಯದ ಬಂಡಿಗುಡ್ಡ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ದಿನಾಂಕ 5-5-2005 ರಂದು ಬೆಳ್ಳಿಯಪ್ಪ ಅರಣ್ಯ ಪ್ರದೇಶದಲ್ಲಿ ಆಕ್ರಮವಾಗಿ ಸಾಗುವಾನಿ ತುಂಡುಗಳು 4=0.352 ಎಂ 3 ಹಾಗೂ 1 ಟನ್ ಕಾಡು ಜಾತಿ ಸೌದೆಯನ್ನು ಸಾಗಾಣಿಕೆ ಮಾಡುತ್ತಿದ್ದ ಒಂದು ಟೆಲ್ಲರ್ ಮತ್ತು ಟ್ರ್ಯಾಲಿ ನಂ. ಕೆಎ-14-ಟಿ-3 ಮತ್ತು ಟಿ-4ನ್ನು ವಶಪಡಿಸಿಕೊಂಡು ಸ್ಥಳದಲ್ಲಿ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ 43/05-06 ನ್ನು ದಾಖಲು ಮಾಡಿ ಅಮಾನತ್ತು ಪಡಿಸಿಕೊಂಡಿರುತ್ತಾರೆ ಹಾಗೂ ಅರಣ್ಯ ಕಾಯಿದೆ 1963 71(ಎ) ಪ್ರಕಾರ ಕ್ರಮ ಜರುಗಿಸಲು ಈ ನ್ಯಾಯಾಲಯಕ್ಕೆ ದಾಖಲಾತಿಗಳ ಸಮೇತ ಹಾಜರುಪಡಿಸಿ ಕೋರಿಕೊಂಡಿರುತ್ತಾರೆ. ಮೇಲ್ಕಂಡ ಪ್ರಕರಣದ ವಾಹನ ಹಾಗೂ ಅರಣ್ಯ ಉತ್ಪನ್ನಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ, ಚನ್ನಗಿರಿ ವಲಯ ಇವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ.

ದಿನಾಂಕ 16-5-2005 ರಂದು ಅರ್ಜಿದಾರರ ಶ್ರೀ ಕೆ. ಮಂಜಪ್ಪ ಬಿನ್ ಕರಿಯಪ್ಪ ವ್ಯವಸಾಯಗಾರರು ಭದ್ರಾವತಿ ಇವರ ಜಿಪಿಎ ಶ್ರೀ ಜಿ. ವಿಜೇಂದ್ರ ಬಿನ್ ಗೋವಿಂದಪ್ಪ, ಅರಳಿಹಳ್ಳಿ ಇವರು ವಕೀಲರ ಮುಖಾಂತರ ಅರ್ಜಿ ಸಲ್ಲಿಸಿ ಟೆಲ್ಲರ್ ಮತ್ತು ಟ್ರೈಲರ್ ಕೆಎ-14-ಟಿ-4 ಮತ್ತು ಕೆಎ-14-ಟಿ-3 ವಾಹನದ ಮಾಲೀಕನಾಗಿರುತ್ತೇನೆ. ಈ ಪ್ರಕರಣಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ. ನಾವು ವ್ಯವಸಾಯಗಾರರಾಗಿದ್ದು ಸದರಿ ವಾಹನದಿಂದಲೇ ಜೀವನ ನಿರ್ವಹಣೆ ಅಗುತ್ತದೆ ಈಗ ಮಳೆಗಾಲ ಪ್ರಾರಂಭವಾಗಿದ್ದು ವ್ಯವಸಾಯ ಕೆಲಸಗಳಿಗೆ ವಾಹನವು ಅತ್ಯಾವಶ್ಯಕವಾಗಿರುತ್ತದೆ. ವಾಹನವನ್ನು ಕಛೇರಿ ಬಯಲಿನಲ್ಲಿಟ್ಟಿರುವುದರಿಂದ ಬಿಸಿಲು ಮಳೆಗೆ ಸಿಕ್ಕಿ ತುಕ್ಕು ಹಿಡಿದು ಹಾಳಾಗುವ ಸಾಧ್ಯತೆಯಿರುತ್ತದೆ. ನಾವುಗಳು ಬಡವರಾಗಿದ್ದು ಸೂಕ್ತ ಷರತ್ತನ್ನು ವಿಧಿಸಿ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ 21-5-2005 ರಂದು ಅರ್ಜಿದಾರರಿಗೆ ಅರಣ್ಯ ಕಾಯಿದೆ 1963 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ವಾಹನದ ಮಾಲೀಕರು ದಿನಾಂಕ: 28-5-2005 ರಂದು ಸಮಜಾಯಿಸಿ ನೀಡಿ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ 1-6-2005 ರಂದು ಸರ್ಕಾರಿ ಸಹಾಯಕ ಅಭಿಯೋಜಕರು ಜೆಎಂಎಫ್‌ಸಿ ನ್ಯಾಯಾಲಯ, ಭದ್ರಾವತಿ ಇವರು ಈ ಪ್ರಕರಣದ ಬಗ್ಗೆ ಆಕ್ಷೇಪಣೆ ಸಲ್ಲಿಸಿ, ಈ ಪ್ರಕರಣದಲ್ಲಿ ಟೆಲ್ಲರ್ ಮತ್ತು ಟ್ರೈಲರ್ ಸಂಖ್ಯೆ ಕೆಎ14 ಟಿ 3 ಮತ್ತು ಟಿ-4ರ ವಾಹನದಲ್ಲಿ ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆ ಆಗಿರುವುದು ವಲಯ

ಅರಣ್ಯಾಧಿಕಾರಿ ಸಲ್ಲಿಸಿದ ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ. ಈ ಸಂದರ್ಭದಲ್ಲಿ ವಾಹನವನ್ನು ಬಿಡುಗಡೆ ಮಾಡಿದಲ್ಲಿ ಪುನಃ ಅಕ್ರಮ ಕೃತ್ಯಗಳಿಗೆ ಉಪಯೋಗಿಸುವ ಸಾಧ್ಯತೆಯಿರುತ್ತದೆ. ಆದ್ದರಿಂದ ಅರ್ಜಿದಾರರ ಅರ್ಜಿಯನ್ನು ವಜಾಗೊಳಿಸಬೇಕಾಗಿ ವಿನಂತಿಸಿರುತ್ತಾರೆ.

ಮೇಲ್ಕಂಡ ಪ್ರಕರಣದ ಅರ್ಜಿದಾರರ ಮಧ್ಯಂತರ ಅರ್ಜಿಯ ಬಗ್ಗೆ ದಿನಾಂಕ: 1–6–2005 ರಂದು ವಿಚಾರಣೆ ನಡೆಸಿರುತ್ತದೆ. ಆ ದಿನ ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳು ಅರ್ಜಿದಾರರ ಅರ್ಜಿ ಹಾಗೂ ಸಹಾಯಕ ಸರ್ಕಾರಿ ಅಭಿಯೋಜಕರ ತಕರಾರು ಅರ್ಜಿಗಳನ್ನು ಪರಿಶೀಲಿಸಿ ವಾಹನವನ್ನು ಕಛೇರಿಯಲ್ಲಿ ಉಪಯೋಗಿಸದೇ ವಿಚಾರಣೆ ಮುಗಿಯುವವರೆಗೂ ನಿಲ್ಲಿಸುವುದು ಸಮಂಜಸವಲ್ಲ ಎಂದು ತೀರ್ಮಾನಿಸಿ ರೂ. 8000–00 ಠೇವಣಿ ಹಣ ಹಾಗೂ ಇಂಡೆಮ್ನಿಟಿ ಬಾಂಡನ್ನು ಷರತ್ತಿನೊಂದಿಗೆ ಪಡೆದು ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ದಿನಾಂಕ: 3–6–2005 ರಂದು ಆದೇಶ ಹೊರಡಿಸಿರುತ್ತದೆ. ವಾಹನದ ಮಾಲೀಕರು ನ್ಯಾಯಾಲಯದ ಎಲ್ಲಾ ಷರತ್ತುಗಳನ್ನು ಪೂರೈಸಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆದಿರುತ್ತಾರೆ.

ಮೇಲ್ಕಂಡ ಪ್ರಕರಣವನ್ನು ಅಂತಿಮವಾಗಿ ತೀರ್ಮಾನಗೊಳಿಸುವ ಸಲುವಾಗಿ ಪ್ರಕರಣದ ವಿಚಾರಣೆಯನ್ನು ದಿನಾಂಕ: 18–1–2006 ರಿಂದ 8–3–2006ರವರೆಗೆ ಹಲವಾರು ದಿನಾಂಕಗಳಂದು ಅಭಿಯೋಜನಾ ಸಾಕ್ಷಿಗಳ ವಿಚಾರಣೆ ನಡೆಸಲಾಯಿತು. ಅರ್ಜಿದಾರರ ಪರವಾಗಿ ಅರ್ಜಿದಾರರು ಹಾಗೂ ಅವರ ವಕೀಲರು ಗೈರು ಹಾಜರಾಗಿರುತ್ತಾರೆ. ಪ್ರಾಸಿಕ್ಯೂಷನ್ ಪರವಾಗಿ ದಿನಾಂಕ: 18–1–2006 ರಂದು ಟಿ.ಆರ್. ರಮೇಶ, ಅರಣ್ಯ ರಕ್ಷಕ ಪ್ರಾಸಾ 1 ಎಂದು ದಿನಾಂಕ: 15–2–2006 ರಂದು ಶ್ರೀ ಇಮಾಮ್ ಸಾಬ್ ವನಪಾಲಕ ಇವರನ್ನು ಪ್ರಾಸಾ 2 ಎಂದು ವಿಚಾರಣೆ ಮಾಡಿ ಹೇಳಿಕೆ ದಾಖಲಿಸಿಕೊಳ್ಳಲಾಯಿತು. ಪ್ರತಿವಾದಿಯ ಪರವಾಗಿ ಯಾವುದೇ ಸಾಕ್ಷಿಗಳನ್ನು ಹಾಜರು ಪಡಿಸಿರುವುದಿಲ್ಲ. ನ್ಯಾಯಾಲಯಕ್ಕೆ ಅರ್ಜಿದಾರರು ಹಾಜರಾಗದೇ ಗೈರು ಹಾಜರಾಗಿರುತ್ತಾರೆ. ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿರುತ್ತಾರೆ. ಷರತ್ತನ್ನು ಮುರಿದಿರುತ್ತಾರೆ.

ಪ್ರಾಧಿಕಾರದಲ್ಲಿ ಹಾಜರು ಪಡಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಯಿತು ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತು ಸ್ಥಿತಿ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಅರ್ಜಿದಾರರ ಟೆಲ್ಲರ್ ಮತ್ತು ಟ್ರೈಲರ್ ಸಂಖ್ಯೆ ಕೆಎ 14 ಟಿ 4–4 ರಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳು 4=0.352 ಎಂ 3 ಹಾಗೂ 1 ಟನ್ ಸೌದೆಯನ್ನು ದಿನಾಂಕ: 5–5–2005 ರಂದು ಕಾನೂನಿಗೆ ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ನಿಯಮ ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ಕಾಯಿದೆ 71(ಎ)(1)ರ ಪ್ರಕಾರ ವಾಹನದ ಮಾಲೀಕರವರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶ ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನಗಳನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ ? ಹಾಗೂ ವಾಹನದ ಮಾಲೀಕರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಅಥವಾ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

4. ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

5. ಏನು ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶಕ್ಕೆ ಮೊದಲನೇ ಭಾಗದ ಪ್ರಶ್ನೆಗೆ ಹೌದು ಎಂದು ಎರಡು ಮತ್ತು ಮೂರನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.
4. ನಾಲ್ಕನೇ ಅಂಶಕ್ಕೆ ಹೌದು ಎಂತಲೂ ಈ ಕೆಳಗಿನ ಕಾರಣಗಳಿಂದ ತೀರ್ಮಾನಕ್ಕೆ ಬರಲಾಗಿದೆ.

## ಕಾರಣಗಳು

**ಅಂಶ:1:–**

ದಿನಾಂಕ: 5–5–2005ರಂದು ಚನ್ನಗಿರಿ ವಲಯದ ಬಂಡಿಗುಡ್ಡ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಬೆಳ್ಳಿಯಪ್ಪ ಅರಣ್ಯ ಪ್ರದೇಶದಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳು 4=0.352 ಎಂ3 ಹಾಗೂ 1 ಟನ್ ಸೌದೆಯನ್ನು ಸಾಗಾಣಿಕೆ ಮಾಡುತ್ತಿದ್ದ ಒಂದು ಟಿಲ್ಲರ್ ಮತ್ತು ಟ್ರಾಲಿ ನಂ. ಕೆಎ 14 ಟಿ 3–4ನ್ನು ವಶಪಡಿಸಿಕೊಂಡು ಸ್ಥಳದಲ್ಲಿಯೇ ಪಂಚನಾಮೆಯನ್ನು ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ 43/05–06ನ್ನು ದಾಖಲು ಮಾಡಿ ವಾಹನ ಹಾಗೂ ಅಮಾನತ್ತು ಪಡಿಸಿದ ಅರಣ್ಯ ಉತ್ಪನ್ನವನ್ನು ಈ ನ್ಯಾಯಾಲಯದ ಸಮಕ್ಷಮ ದಾಖಲಾತಿಗಳೊಂದಿಗೆ ಹಾಜರು ಪಡಿಸಿರುತ್ತಾರೆ.

ಈ ಸಂಬಂಧ ಅಭಿಯೋಜನಾ ವತಿಯಿಂದ ಮೇಲ್ಕಂಡ ಸಾಕ್ಷಿದಾರರಾದ ಪಿಡಬ್ಲ್ಯೂ1 ಮತ್ತು ಪಿಡಬ್ಲ್ಯೂ 2 ಇವರುಗಳು ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿದಿದ್ದು ಅವರ ಹೇಳಿಕೆ ಪ್ರಕಾರ ದಿನಾಂಕ: 5–5–2005ರಂದು ಬೀಟ್ 3ರ ಬೆಳ್ಳಿಯಪ್ಪ ಅರಣ್ಯ ಪ್ರದೇಶಕ್ಕೆ ಗಸ್ತು ಮಾಡಲು ಹೋಗಿದ್ದೆವು, ಸುಮಾರು 12 ರಿಂದ 12–30ರ ಸಮಯದಲ್ಲಿ ಒಂದು ಫವರ್ ಟಿಲ್ಲರ್ ಬರುವುದನ್ನು ನೋಡಿದೆವು ವಾಹನದಲ್ಲಿದ್ದ ಸುಮಾರು 8 ಜನರು ಇಲಾಖೆಯವರಾದ ನಮ್ಮನ್ನು ಕಂಡು ಓಡಿ ಪರಾರಿಯಾದರು ಟಿಲ್ಲರ್‌ನ್ನು ತಪಾಸಣೆ ಮಾಡಲಾಗಿ ಅದರಲ್ಲಿ ಕಾಡುಜಾತಿ ಸೌದೆ ಹಾಗೂ ಅದರ ಕೆಳಭಾಗದಲ್ಲಿ 4 ಸಾಗುವಾನಿ ತುಂಡುಗಳು ತುಂಬಿತ್ತು ಟಿಲ್ಲರ್ ನಿಂದ ಸ್ವಲ್ಪ ದೂರದಲ್ಲಿ 2 ಸಾಗುವಾನಿ ಮರ ಹೊಸದಾಗಿ ಕಡಿತಲೆಯಾಗಿದ್ದು ಕಂಡು ಬಂದಿತು. ಸದರಿ 2 ಮರಗಳಿಂದ ತುಂಡುಗಳು ಮಾಡಲಾಗಿರುವುದು ಕಂಡು ಬಂದಿತು. ವಾಹನವನ್ನು ಪರಿಶೀಲಿಸಿದಾಗ ವಾಹನದ ನೊಂದಣಿ ಸಂಖ್ಯೆ ಕೆಎ 14 ಟಿ 3–4 ಅಗಿತ್ತು. ಸದರಿ ಟಿಲ್ಲರ್‌ನ್ನು ಹಾಗೂ ಸಾಗುವಾನಿ ತುಂಡುಗಳನ್ನು ಮಹಜರ್ ಮಾಡಿ ಅಮಾನತ್ತು ಪಡಿಸಿಕೊಳ್ಳಲಾಯಿತು ಅಮಾನತ್ತು ಪಡಿಸಿಕೊಂಡ ವಸ್ತುಗಳಿಗೆ ಕ್ರಮಸಂಖ್ಯೆ ನೀಡಲಾಯಿತು. ಸದರಿ ವಾಹನ ಮತ್ತು ಸಾಗುವಾನಿ ತುಂಡುಗಳನ್ನು ಉಬ್ರಾಣಿ ವಿಶ್ರಾಂತಿ ಗೃಹಕ್ಕೆ ತರಲಾಯಿತು. ಸ್ಥಳದಲ್ಲಿ ಮಾಡಿದ ಮಹಜರ್‌ನ್ನು ನಿಶಾನೆ ಪಿ1 ಎಂದು ಸಾಕ್ಷಿದಾರರ ಸಹಿಯನ್ನು ಕ್ರಮವಾಗಿ ನಿಶಾನೆ ಪಿ1ಎ ಮತ್ತು ಪಿ1ಬಿ ಎಂದು ಗುರುತಿಸಲಾಯಿತು. ಪ್ರಕರಣದ ಬಗ್ಗೆ ಪ್ರಥಮ ವರ್ತಮಾನದ ವರದಿಯನ್ನು ಮೇಲಾಧಿಕಾರಿಗಳಿಗೂ ಹಾಗೂ ನ್ಯಾಯಾಲಯಕ್ಕೂ ಕಳುಹಿಸಿ ಕೊಡಲಾಯಿತು. ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ2 ಎಂದು ಸಾಕ್ಷಿದಾರರ ಸಹಿಯನ್ನು ನಿಶಾನೆ ಪಿ2ಎ ಎಂದು ಗುರುತಿಸಲಾಯಿತು. ಸೀಜರ್ ರಿಪೋರ್ಟನ್ನು ನಿಶಾನೆ ಪಿ3 ಎಂದು ಸಾಕ್ಷಿದಾರರ ಸಹಿಯನ್ನು ನಿಶಾನೆ ಪಿ3ಎ ಎಂದು ಗುರುತಿಸಿರುತ್ತದೆ. ಓಡಿಹೋದ ವ್ಯಕ್ತಿಗಳ ಮುಖ ಪರಿಚಯವಿದ್ದು ಆತನ ಹೆಸರು ಕೃಷ್ಣಮೂರ್ತಿ ಬಿನ್ ಹನುಮಪ್ಪ, ಅತ್ತಿಗುಂದ ಆಗಿರುತ್ತಾರೆ. ಅಮಾನತ್ತು ಪಡಿಸಿಕೊಂಡ ಫವರ್ ಟಿಲ್ಲರ್ ಹಾಗೂ ಟ್ರೈಲರ್ ಮತ್ತು ಸಾಗುವಾನಿ ತುಂಡುಗಳು ಸೌದೆಯನ್ನು ನೋಡಿದರೆ ಗುರುತಿಸುತ್ತೇನೆ ಎಂದು ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರು ಹಾಗೂ ಅವರ ವಕೀಲರು ಗೈರು ಹಾಜರಾಗಿದ್ದರಿಂದ ಪಾಟೀಸವಾಲನ್ನು ಇಲ್ಲವೆಂದು ಪರಿಗಣಿಸಲಾಯಿತು.

ಮೇಲ್ಕಂಡ ಪಿಡಬ್ಲ್ಯೂ1 ಮತ್ತು ಪಿಡಬ್ಲ್ಯೂ2 ಸಾಕ್ಷಿದಾರರು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಮತ್ತು ಸ್ಥಳ ಮಹಜರ್ ನಲ್ಲಿರುವ ಅಂಶಗಳಿಗೂ ತಾಳೆ ಹೊಂದಿರುತ್ತದೆ. ಅಲ್ಲದೇ ಎಲ್ಲಾ ಸಾಕ್ಷಿದಾರರು ನೀಡಿದ ಹೇಳಿಕೆಗಳು ಒಂದೇ ಆಗಿದ್ದು ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅರ್ಜಿದಾರರ ವಾಹನದಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳು ಹಾಗೂ ಸೌದೆ ಸಾಗಾಣಿಕೆ ಅಗಿರುವುದು ಹಾಗೂ ಅರಣ್ಯ ಕಾಯ್ದೆ ಕಾನೂನುಗಳನ್ನು ಉಲ್ಲಂಘನೆ ಮಾಡಿರುವುದು ಸಂಶಯ ರಹಿತವಾಗಿ ರುಜುವಾತು ಪಡಿಸಿರುತ್ತಾರೆ. ಈ ಬಗ್ಗೆ ಅಧಿಕೃತವಾದ ಸಾಕ್ಷ್ಯಾಧಾರಗಳನ್ನು ಸಹ ನೀಡಿರುತ್ತಾರೆ ಹಾಗೂ ಗುರುತಿಸಿಕೊಂಡಿರುತ್ತಾರೆ. ಅದ್ದರಿಂದ ಅಂಶ1ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ:2:–**

ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ಪವರ್ ಟಿಲ್ಲರ್ ಮತ್ತು ಟ್ರೈಲರ್ ಸಂಖ್ಯೆ ಕೆಎ 14 ಟಿ 3–4ರ ಮಾಲೀಕರಾದ ಶ್ರೀ ಕೆ. ಮಂಜಪ್ಪ ಬಿನ್ ಕರಿಯಪ್ಪ ಇವರ ಜಿಪಿಎ ಆದ ವಿಜೇಂದ್ರ ಬಿನ್ ಗೋವಿಂದಪ್ಪ ಇವರು ವಕೀಲರ ಮುಖಾಂತರ ದಿನಾಂಕ: 10–5–2005ರಂದು ಅರ್ಜಿದಾರರಿಗೆ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ಅರ್ಜಿದಾರರು ದಿನಾಂಕ: 28–5–2005ರಂದು ಸಮಜಾಯಿಸಿ ನೀಡಿ ವಾಹನ ಬಿಡುಗಡೆ ಕೋರಿರುತ್ತಾರೆ. ವಾಹನವನ್ನು ಷರತ್ತುಗಳನ್ನು ವಿಧಿಸಿ ಈ ನ್ಯಾಯಾಲಯವು ತಾತ್ಕಾಲಿಕವಾಗಿ ಬಿಡುಗಡೆ ಮಾಡಿದ್ದು ಅರ್ಜಿದಾರರು ನಂತರದ ವಿಚಾರಣೆಗೆ ಹಾಜರಾಗದೇ ಗೈರು ಹಾಜರಾಗಿ ನ್ಯಾಯಾಲಯದ ಆದೇಶವನ್ನು ಹಾಗೂ ಷರತ್ತನ್ನು ಉಲ್ಲಂಘನೆ ಮಾಡಿರುತ್ತಾರೆ. ಆದ ಕಾರಣ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71 (ಬಿ) ಪ್ರಕಾರ ಆರ್ ಸಿ ಮಾಲೀಕರಿಗೆ ಸಾಕಷ್ಟು ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ. ಆದ ಕಾರಣ ಅಂಶ–2ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ:3:–**

ವಾಹನದ ಅರ್ ಸಿ ಮಾಲೀಕರಾದ ಶ್ರೀ ಕೆ. ಮಂಜಪ್ಪ ಬಿನ್ ಕರಿಯಪ್ಪ ಇವರ ಜಿಪಿಎ ಜಿ. ವಿಜೇಂದ್ರ ಬಿನ್ ಲೇಟ್ ಗೋವಿಂದಪ್ಪ, ಅರಳಿಹಳ್ಳಿ ಭದ್ರಾವತಿ ಇವರು ದಿನಾಂಕ: 10–5–2005 ರಂದು ಈ ಪ್ರಾಧಿಕಾರದಲ್ಲಿ ವಾಹನದ ತಾತ್ಕಾಲಿಕ ಬಿಡುಗಡೆ ಕೋರಿ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ವಾಹನದ ತಾತ್ಕಾಲಿಕ ಬಿಡುಗಡೆ ಅರ್ಜಿಯ ಬಗ್ಗೆ ವಿಚಾರಣೆ ನಡೆಸಿ ವಾಹನವು ವಿಚಾರಣೆ ಮುಗಿಯುವ ತನಕ ಇಲಾಖಾ ವಶದಲ್ಲಿ ಚಲಿಸದೇ ನಿಲ್ಲಿಸಿರುವುದರಿಂದ ವಾಹನವು ಉಪಯೋಗಕ್ಕೆ ಬರುವುದಿಲ್ಲ. ಇದರಿಂದ ಸರ್ಕಾರಕ್ಕೆ ಯಾವುದೇ ಅದಾಯ ಇರುವುದಿಲ್ಲ ಎಂದು ಮನಗಂಡು ರೂ. 8000–00 ಠೇವಣಿ ಹಣವನ್ನು ಜಂಟಿ ಖಾತೆಯಲ್ಲಿ ಪಡೆದು ಇತರೆ ಷರತ್ತಿನೊಂದಿಗೆ ವಾಹನವನ್ನು ದಿನಾಂಕ: 3–6–2005ರಂದು ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ಆದೇಶ ಹೊರಡಿಸಿರುತ್ತದೆ. ವಾಹನದ ಮಾಲೀಕರು ಎಲ್ಲಾ ಷರತ್ತುಗಳ ಬಗ್ಗೆ ಇಂಡೆಮ್ನಿಟಿ ಬಾಂಡ್ ಹಾಗೂ 8000–00 ರೂ.ಗಳ ಠೇವಣಿ ಹಣವನ್ನು ಬ್ಯಾಂಕ್ ರಶೀದಿ ಮೂಲಕ ನೀಡಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆದಿರುತ್ತಾರೆ.

ಈ ಪ್ರಕರಣದಲ್ಲಿ ಅಂತಿಮ ಆದೇಶ ಹೊರಡಿಸಲು ದಿನಾಂಕ: 18–1–2006 ರಿಂದ 8–3–2006ರವರೆಗೆ ವಿಚಾರಣೆ ನಡೆಸಿದ್ದು ಆ ಸಂದರ್ಭದಲ್ಲಿ ವಾಹನ ಮಾಲೀಕರಿಗೆ ನೋಟೀಸ್ ಜಾರಿ ಮಾಡಿ ನ್ಯಾಯಾಲಯಕ್ಕೆ ಹಾಜರಾಗಲು ತಿಳಿಸಿರುತ್ತದೆ. ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ನ್ಯಾಯಾಲಯಕ್ಕೆ ಗೈರು ಹಾಜರಾಗಿರುತ್ತಾರೆ. ಅಲ್ಲದೇ ಅವರು ವಾಹನವನ್ನು ತಾತ್ಕಾಲಿಕ ಬಿಡುಗಡೆ ಸಂಬಂಧ ಷರತ್ತು ವಿಧಿಸಿ ಹೊರಡಿಸಿದ ಈ ನ್ಯಾಯಾಲಯದ ಆದೇಶವನ್ನು ಪಾಲಿಸದೇ ತಿರಸ್ಕರಿಸಿ ಅಪರಾಧ ಎಸಗಿರುತ್ತಾರೆ. ಅದ್ದರಿಂದ ಈ ಕೆಳಗಿನ ಅಂಶಗಳನ್ನು ಗಣನೆಗೆ ತೆಗೆದುಕೊಂಡಿರುತ್ತೇನೆ.

1. ಅರ್ಜಿದಾರರು ಹಾಗೂ ಅವರ ಪರ ವಕೀಲರು ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ ಅರ್ಜಿದಾರರು ವಾಹನ ತಾತ್ಕಾಲಿಕ ಬಿಡುಗಡೆ ಸಂಬಂಧ ಈ ನ್ಯಾಯಾಲಯಕ್ಕೆ ಸಲ್ಲಿಸಿದ ಇಂಡೆಮ್ನಿಟಿ ಬಾಂಡ್‌ನಲ್ಲಿರುವ ಷರತ್ತುಗಳನ್ನು ಉಲ್ಲಂಘಿಸಿರುತ್ತಾರೆ.
2. ಇಂಡೆಮ್ನಿಟಿ ಬಾಂಡಿನಲ್ಲಿರುವಂತೆ ಹಾಗೂ ಈ ನ್ಯಾಯಾಲಯದ ತಾತ್ಕಾಲಿಕ ಬಿಡುಗಡೆ ಬಗ್ಗೆ ಇರುವ ಷರತ್ತಿನಂತೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಮಾಡಬಹುದಾಗಿರುತ್ತದೆ.
3. ಈ ನ್ಯಾಯಾಲಯದ ಷರತ್ತು ಪಾಲಿಸದ ಅರ್ಜಿದಾರರು ವಾಹನವನ್ನು ತಾತ್ಕಾಲಿಕ ಬಿಡುಗಡೆ ಸಂಬಂಧ ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿರುವ ವಿಷಯಗಳು ಸತ್ಯಕ್ಕೆ ದೂರವಾದದ್ದು ಇದು ಒಂದು ಕಟ್ಟುಕತೆ ಎಂಬುದು ದೃಢಪಟ್ಟಿರುತ್ತದೆ.
4. ಅರ್ಜಿದಾರರು ವಾಹನವನ್ನು ಮದುವೆ ಕಾರ್ಯಕ್ರಮಕೋಸ್ಕರ ಬಾಡಿಗೆ ನೀಡಿರುವುದಾಗಿ ಅವರ ಮಧ್ಯಂತರ ಅರ್ಜಿಯಲ್ಲಿ ತಿಳಿಸಿದ್ದು ಆ ಸಮಯದಲ್ಲಿ ಈ ಕೃತ್ಯ ನಡೆದಿರುವುದಾಗಿ ನನಗೆ ಏನೂ ಗೊತ್ತಿಲ್ಲ ಎಂದು ತಿಳಿಸಿರುತ್ತಾರೆ. ಆದರೆ ವಾಹನ ಬಾಡಿಗೆ ತೆಗೆದುಕೊಂಡು ಹೋದ ವ್ಯಕ್ತಿಗಳ ಮೇಲೆ ಪೊಲೀಸ್ ಇಲಾಖೆಯಲ್ಲಿ ಯಾವುದೇ ಫಿರ್ಯಾದು ನೀಡಿರುವುದು ಕಂಡು ಬಂದಿರುವುದಿಲ್ಲ.
5. ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಅಥವಾ ಅದಕ್ಕೆ ಸಂಬಂಧಪಟ್ಟವರು ವಾಹನವನ್ನು ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ರಹದಾರಿಯಿಲ್ಲದೆ ಕಳ್ಳ ಸಾಗಾಣಿಕೆಗೆ ಬಳಸಿದಾಗ ಅದು ತನ್ನ ಗಮನಕ್ಕೆ ಬಾರದಂತೆ ಈ ಕೃತ್ಯವು ನಡೆದಿದೆ. ಎಂಬುದನ್ನು ಸಮರ್ಥಿಸುವ ಸಾಕ್ಷ್ಯಧಾರಗಳನ್ನು ವಾಹನದ ಮಾಲೀಕರು ನೀಡಿರುವುದಿಲ್ಲ. ಅಲ್ಲದೇ ಈ ವಾಹನದಲ್ಲಿ ಸಾಗುವಾನಿ ತುಂಡುಗಳು ಅಕ್ರಮ ಸಾಗಾಣಿಕೆಗೆ ಬಳಕೆಯಾಗದಂತೆ ಮುಂಜಾಗ್ರತೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷಧಾರ ನೀಡಿರುವುದಿಲ್ಲ. ವಾಹನದಲ್ಲಿ ತನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯ್ದೆ ಕಲಂ 71(ಬಿ) (2) ರೀತ್ಯಾ ಸಾಬೀತು ಪಡಿಸುವ ಜವಾಬ್ದಾರಿ ವಾಹನದ ಮಾಲೀಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೇ ವಾಹನದ ಮಾಲೀಕರ ಏಜೆಂಟರಾಗಲೀ ಚಾಲಕರಾಗಲೀ ಅಥವಾ ಇತರೆ ನಂಬಿಕೆ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಅವರುಗಳ ಜವಾಬ್ದಾರಿಯಾಗಿರುತ್ತದೆ.

"Without prejudice to the provisions of sub-section (1), no order confiscating any tool, rope, chain, boat, vehicle or cattle shall be made under section 71A if the owner of the tool, rope, chain, boat, vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool, rope, chain, boat, vehicle or cattle and that each of them had taken all reasonable and necessary precautions against such use."

ಹಾಲಿ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ವಾಹನದ ಮಾಲೀಕರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿರುವ ವಿಚಾರವು ವಾಹನವನ್ನು ಬಿಡಿಸಿಕೊಳ್ಳಲು ಸೃಷ್ಟಿಸಿದ ಒಂದು ಕಟ್ಟು ಕತೆ ಎಂದು ಹಾಗೂ ವಾಹನದಲ್ಲಿ ಸಾಗುವಾನಿ ತುಂಡುಗಳು ಹಾಗೂ ಸೌದೆಯನ್ನು ಅಕ್ರಮ ಸಾಗಾಣಿಕೆ ವಾಹನದ ಮಾಲೀಕರಿಗೆ ಗೊತ್ತಿದ್ದೇ ಈ ಕೃತ್ಯ ನಡೆದಿದೆಯೆಂದು ಅಭಿಪ್ರಾಯ ಪಡುತ್ತೇನೆ. ಈ ಮೇಲಿನ ಎಲ್ಲಾ ಕಾರಣಗಳಿಂದ 3ನೇ ಅಂಶದ ಮೊದಲನೇ ಭಾಗದ ಪ್ರಶ್ನೆಗೆ ನನ್ನ ಉತ್ತರ ಹೌದು ಎಂದು ಎರಡನೇ ಹಾಗೂ ಮೂರನೇ ಭಾಗದ ಪ್ರಶ್ನೆಗೆ ನನ್ನ ಉತ್ತರ ಇಲ್ಲವೆಂದು ಅಭಿಪ್ರಾಯ ಪಡುತ್ತೇನೆ.

**ಅಂಶ:4:–**

ಅರ್ಜಿದಾರರಿಗೆ ಸೇರಿದ ಟಿಲ್ಲರ್ ಮತ್ತು ಟ್ರೈಲರ್ ಕೆಎ 14 ಟಿ 3–4 ರಲ್ಲಿ ಸರ್ಕಾರದ ಸೊತ್ತಾದ ಸಾಗುವಾನಿ ತುಂಡುಗಳು 4=0.352 ಎಂ 3 ಹಾಗೂ 1 ಟನ್ ಸೌದೆಯನ್ನು ಅಕ್ರಮವಾಗಿ ಸಾಗಿಸಲು ಬಳಸಲಾಗಿದ್ದು ವಾಹನದ ಮಾಲೀಕರು ಪ್ರತ್ಯೇಕ್ಷ ಹಾಗೂ ಪರೋಕ್ಷವಾಗಿ ಭಾಗಿಯಾಗಿದ್ದರೆಂಬುದು ಸಾಕ್ಷ್ಯಧಾರಗಳಿಂದ ರುಜುವಾತಾಗಿರುತ್ತದೆ. ಫಿರ್ಯಾಧಿದಾರರು ಮಾಲುಗಳ ಸಮೇತ ವಾಹನ ಅಮಾನತ್ತು ಪಡಿಸಿದ್ದು ಅವುಗಳ ಬಗ್ಗೆ ಸಮರ್ಪಕವಾದ ಸಾಕ್ಷ್ಯಧಾರಗಳನ್ನು ಅವರು ನೀಡಿರುತ್ತಾರೆ. ಅರ್ಜಿದಾರರು ತಾನು ಮಾಡದೇ ಇರುವ ಅಪಾದನೆಯನ್ನು ಪುರಾವೆ ಮಾಡುವಲ್ಲಿ ಸಾಕ್ಷ್ಯಾಧಾರಗಳನ್ನು ಹಾಜರು ಪಡಿಸದ ಕಾರಣ ಅರ್ಜಿದಾರರ ವಾಹನ ಅಕ್ರಮ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ನಿಸ್ಸಂದೇಹವಾಗಿ ಪುರಾವೆಯಾಗಿರುತ್ತದೆ. ಅದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ. ಅದ್ದರಿಂದ ಅಂಶ–5ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಸೂಕ್ಷವಾಗಿ ಗಮನಿಸಿದಾಗ ವಾಹನದ ಮಾಲೀಕರು ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಭಾಗವಹಿಸಲು ವಾಹನವನ್ನು ಉಪಯೋಗಿಸಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಅಲ್ಲದೇ ಪ್ರಾಧಿಕಾರಕ್ಕೆ ಹಾಜರು ಪಡಿಸಿದ ಪ್ರಕರಣದ ಮಹಜರ್ ನಿಶಾನೆ ಪಿಡಬ್ಲ್ಯೂ1 ಮತ್ತು ಪಿಡಬ್ಲ್ಯೂ2 ರವರು ಈ ಪ್ರಾಧಿಕಾರದಲ್ಲಿ ಸಾಕ್ಷಿ ನುಡಿದಂತೆ ಸಾಗುವನಿ ತುಂಡುಗಳು 4=0.352ಎಂ3 ಹಾಗೂ 1 ಟನ್ ಸೌದೆ ಸಾಗಿಸಲು ಉಪಯೋಗಿಸಲು ವಾಹನ ಬಳಸಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಅಲ್ಲದೇ ನನ್ನ ಮುಂದೆ ಹಾಜರು ಪಡಿಸಿದ ದಾಖಲಾತಿಗಳು ಸಾಕ್ಷ್ಯಾಧಾರಗಳು ಮತ್ತು ವಾದ ವಿವಾದಗಳಿಂದ ವಾಹನ ಮಾಲೀಕರೇ ಆಗಲೀ ಇಲ್ಲವೇ ವಾಹನದ ಉಸ್ತುವಾರಿದಾರರಾಗಲೀ ವಾಹನವು ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಭಾಗಿಯಾಗದಂತೆ ಮುಂಜಾಗ್ರತೆ ಕ್ರಮ ತೆಗೆದುಕೊಳ್ಳದೇ ಬದಲಾಗಿ ತಮಗೆ ಗೊತ್ತಿದ್ದೆ ಈ ಎಲ್ಲಾ ವ್ಯಕ್ತಿಗಳು ಈ ವಾಹನದಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳು 4=0.352ಎಂ3 ಹಾಗೂ 1 ಟನ್ ಸೌದೆಯನ್ನು ಅರಣ್ಯ ಕಾಯ್ದೆ 1963 ಕಲಂ 24,50,62,80,71(ಎ) ಹಾಗೂ ಅರಣ್ಯ ಕಾನೂನು 1969 ಕರ್ನಾಟಕ ಅರಣ್ಯ ಸಂಹಿತೆ 144, 165ರರ ವಿರುದ್ದವಾಗಿ ಸಾಗಿಸಲು ಉಪಯೋಗಿಸಿದ್ದಾರೆಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ನೀಡಬಯಸುತ್ತೇನೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷ್ಯಾಧಾರಗಳನ್ನು ಮತ್ತು ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಎ. ರಾಧಾದೇವಿ, ಭಾ.ಅ.ಸೇ, ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಅದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) (2ನೇ ತಿದ್ದುಪಡಿ) ಪ್ರಕಾರ ನೊಂದಾವಣೆ ಸಂಖ್ಯೆ ಕೆಎ 14–ಟಿ–3 ಮತ್ತು ಕೆಎ 14 ಟಿ–4 ಟಿಲ್ಲರ್ ಮತ್ತು ಟ್ರಾಲಿ (ಇಂಜಿನ್ ನಂ. ಎ 194, 1908, ಛಾಸೀಸ್ ನಂ. ಎ2 94 1438) ಹಾಗೂ ಸಾಗುವಾನಿ ತುಂಡು 4=0.352 ಎಂ3 ಹಾಗೂ 1 ಟನ್ ಸೌದೆಯನ್ನು ಸರ್ಕಾರಕ್ಕೆ ಮುಟ್ಟುಗೋಲು ಮಾಡಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ದ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಅದೇಶ ಹೊರಡಿಸಿದ 30 ದಿವಸದೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಅದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಕಾನೂನು ರೀತ್ಯ ವಿಲೇವಾರಿ ಮಾಡಲು ಕೂಡ ಅದೇಶಿಸಿದೆ.

ಈ ಆದೇಶವನ್ನು ದಿನಾಂಕ: 22–3–2006ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತದೆ.

**ಎ. ರಾಧಾದೇವಿ**

ಪಿ.ಆರ್. 764

ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ.

**DIRECTORATE OF ECONOMICS AND STATISTICS,**

**BANGALORE-1,**

**Consumer Price Index Numbers for Industrial Workers.**

No. DES 23 PWX 2005 — Month : Jan 2006

State : Karnataka. — Base : 1987-88=100 — Date : 03-04-2006

| | Group/Sub-Group | Bell-ary | Bhad--ra-Vathi | Da-van-gere | Dan-deli | Gul-Bar-Ga | Hari-har | Has-san | Man-dya | Man-ga-lore | Rai-chur | Tum-kur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| **I.** | **FOOD**: | | | | | | | | | | | |
| | (a) Cereals & Products | 355 | 400 | 383 | 337 | 344 | 349 | 354 | 361 | 263 | 323 | 360 |
| | (b) Pulses & Products | 322 | 350 | 350 | 394 | 296 | 331 | 358 | 365 | 362 | 302 | 325 |
| | (c) Oil & Fats | 245 | 239 | 254 | 251 | 264 | 248 | 255 | 260 | 228 | 259 | 258 |
| | (d) Meat, Fish & Eggs | 369 | 364 | 382 | 480 | 408 | 351 | 337 | 377 | 533 | 446 | 348 |
| | (e) Milk & Products | 334 | 262 | 322 | 323 | 306 | 267 | 251 | 342 | 289 | 307 | 281 |
| | (f) Condiments & Spices | 231 | 328 | 365 | 368 | 280 | 278 | 300 | 273 | 270 | 235 | 308 |
| | (g) Vegetables & Fruits | 248 | 286 | 413 | 378 | 253 | 350 | 323 | 387 | 306 | 240 | 435 |
| | (h) Other Food | 297 | 400 | 365 | 370 | 304 | 317 | 338 | 320 | 282 | 331 | 348 |
| | **FOOD GROUP INDEX** | **315** | **350** | **363** | **356** | **314** | **316** | **324** | **347** | **320** | **314** | **338** |
| **II.** | Pan, Supari, Tobacco & Intoxicants | 311 | 348 | 354 | 337 | 387 | 459 | 360 | 475 | 295 | 359 | 374 |
| **III.** | Fuel & Light | 320 | 323 | 313 | 457 | 293 | 326 | 354 | 333 | 272 | 481 | 289 |
| **IV.** | Housing | 100 | 100 | 100 | 100 | 100 | 100 | 100 | 100 | 100 | 100 | 100 |
| **V.** | Clothing, Bedding & Footwear | 255 | 251 | 227 | 374 | 277 | 266 | 340 | 382 | 242 | 432 | 214 |
| **VI.** | **Miscellaneous** : | | | | | | | | | | | |
| | (a) Medical Care | 602 | 520 | 372 | 291 | 288 | 268 | 381 | 324 | 361 | 394 | 216 |
| | (b) Education, Recreation & Amusement | 351 | 339 | 516 | 221 | 391 | 483 | 340 | 293 | 434 | 322 | 326 |
| | (c) Transport & Communication | 414 | 415 | 332 | 526 | 595 | 409 | 365 | 561 | 458 | 390 | 440 |
| | (d) Personal Care & effects | 262 | 274 | 257 | 272 | 337 | 259 | 309 | 290 | 266 | 269 | 273 |
| | (e) Others | 336 | 360 | 282 | 429 | 302 | 273 | 253 | 286 | 236 | 426 | 243 |
| | Miscellaneous Group | 377 | 350 | 334 | 328 | 357 | 325 | 324 | 306 | 335 | 356 | 285 |
| | **GENERAL INDEX** | **295** | **311** | **311** | **336** | **291** | **290** | **303** | **318** | **290** | **322** | **274** |
| | To convert to Base 1960 Multiply by Linking Factor. | 7.39 | 9.19 | 8.27 | ... | 8.26 | 8.56 | 9.25 | 7.92 | 9.31 | ... | ... |

for Director,

**Government of India**
**Ministry of Labour**
**Labour Bureau**
**No: 112/1(KTK) / 2006 - HCPI, Dated: 20th March 2006.**
**CONSUMER PRICE INDEX NUMBERS FOR INDUSTRIAL WORKERS (BASE-2001=100)**

STATE : KARNATAKA MONTH: JANUARY, 06

| Code | Centre | BANGALORE | BELGAUM | HUBLI DHARWAD | MERCARA | MYSORE |
|---|---|---|---|---|---|---|
| 1000 | IA : Food Linking Factor | 4.51 | 5.02 | 4.71 | 4.47 | New |
| 1100 | (a) Cereals & Products | 114 | 112 | 117 | 102 | 115 |
| 1200 | (b) Pulses and Products | 116 | 112 | 116 | 112 | 111 |
| 1300 | (c) Oils & Fats | 127 | 129 | 124 | 142 | 126 |
| 1400 | (d) Meat, Fish & Eggs | 128 | 134 | 128 | 110 | 127 |
| 1500 | (e) Milk & Products | 118 | 115 | 97 | 115 | 121 |
| 1600 | (f) Condiments & Spices | 112 | 102 | 110 | 111 | 114 |
| 1700 | (g) Vegetables & Fruits | 127 | 138 | 124 | 126 | 121 |
| 1800 | (h) Other Food | 119 | 123 | 117 | 123 | 119 |
| 1000 | FOOD GROUP | 119 | 119 | 116 | 113 | 119 |
| 2000 | Pan, Supari, Tobacco & intoxicants | 112 | 112 | 108 | 102 | 109 |
| 3000 | Fuel and Light | 139 | 137 | 124 | 104 | 146 |
| 4000 | Housing Index | 120 | 111 | 119 | 103 | 116 |
| 5000 | Clothing, Bedding and Footweare | 89 | 109 | 110 | 112 | 118 |
| 6000 | Miscellaneous | | | | | |
| 6100 | (a) Medical Care | 127 | 127 | 109 | 116 | 123 |
| 6200 | (b) Education, Recreation & Amusement | 121 | 117 | 121 | 116 | 107 |
| 6300 | (c) Transport and Communication | 150 | 172 | 164 | 148 | 144 |
| 6400 | (d) Personal Care & Effects | 128 | 114 | 114 | 113 | 121 |
| 6500 | (e) Others | 108 | 111 | 116 | 109 | 124 |
| 6600 | Miscellaneous Group | 131 | 129 | 125 | 122 | 124 |
| | GENERAL INDEX | 121 | 121 | 118 | 112 | 121 |

**RAJESH THAKUR**
P.R. 794 JOINT DIRECTOR

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.**

**ಸಂಖ್ಯೆ: ಜೆಆರ್‌ಬಿ : ಎಲ್‌ಕ್ಯೂಡಿ : 52 : ಎಲ್‌ಎಂಸಿ : 97-98, ದಿನಾಂಕ 31ನೇ ಮಾರ್ಚ್ 2006.**

**ವಿಷಯ :** ಸಮಾಪನೆಗೊಂಡಿರುವ ಶ್ರೀ ಮೈಲಾರಲಿಂಗೇಶ್ವರ ಉಣ್ಣೆ ಕೈಮಗ್ಗದ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ., ಐ.ಡಿ. ಹಳ್ಳಿ, ಈ ಸಂಘದ ನೋಂದಣಿ ರದ್ದುಪಡಿಸುವ ಬಗ್ಗೆ

**ಉಲ್ಲೇಖ :** ಈ ಕಛೇರಿ ಆದೇಶ ಸಂಖ್ಯೆ: ಜೆಆರ್‌ಬಿ : ಎಲ್‌ಕ್ಯೂಡಿ : 52 : ಎಲ್‌ಎಂಸಿ : 97-98, ದಿ. 20.04.1998 ಮತ್ತು 04.04.2002.

2) ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ರವರ ಪ್ರಸ್ತಾವನೆ ಸಂ : ಡಿಆರ್‌ಬಿ : ಡಿಎಲ್‌ಎಸ್ : 108 : 97-98, ದಿನಾಂಕ: 14.11.05 ಮತ್ತು ದಿ: 19.01.2006.

ಶ್ರೀ ಮೈಲಾರಲಿಂಗೇಶ್ವರ ಉಣ್ಣೆ ಕೈಮಗ್ಗದ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿಯಮಿತ, ಐ.ಡಿ.ಹಳ್ಳಿ, ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್‌ಬಿ : 787 : 54-55, ದಿನಾಂಕ: 03.03.1955 ರನ್ವಯ ನೋಂದಣಿಯಾಗಿದ್ದು, ತಾಲ್ಲೂಕು ಮಟ್ಟದ ಕಾರ್ಯವ್ಯಾಪ್ತಿಯನ್ನು ಹೊಂದಿದ್ದು, ಈ ಸಂಘವು

ಸ್ಥಗಿತಗೊಂಡಿದ್ದರಿಂದ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ರವರ ಶಿಫಾರಸ್ಸಿನ್ವಯ ಈ ಕಛೇರಿಯ ಉಲ್ಲೇಖ (1) ರ ಆದೇಶ ದಿನಾಂಕ: 20.04.1998 ರಂದು ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು, ಮಧುಗಿರಿ ತಾಲ್ಲೂಕುರವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು, ನಂತರ ಆಡಳಿತಾತ್ಮಕ ಕಾರಣಗಳಿಂದಾಗಿ ಸದರಿ ಸಮಾಪನಾಧಿಕಾರಿಯನ್ನು ಬದಲಿಸಿ ದಿನಾಂಕ: 04.04.2002 ರಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ (ಮಾರಾಟಾಧಿಕಾರಿ) ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಧುಗಿರಿರವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು. ಸದರಿಯವರು ದಿನಾಂಕ: 07.01.2004 ರಲ್ಲಿ ಸಂಘದ ಪ್ರಭಾರ ಪಡೆದು ದಿ. 25.10.2005 ರಂದು ನಡವಳಿಕೆ ಮಾಡಿದ್ದು ಸಂಘದ ಆಸ್ತಿ – ಜವಾಬ್ದಾರಿಗಳನ್ನು ಕಾಯಿದೆ ಮತ್ತು ನಿಯಮಾನುಸಾರ ವಿಲೇವಾರಿಗೆ ಕ್ರಮ ಇಟ್ಟಿರುತ್ತಾರೆ. ಸಂಘವು ಹೊಂದಿದ್ದ 31 x 32 ವಿಸ್ತೀರ್ಣದ ನಿವೇಶನವನ್ನು ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಐ.ಡಿ.ಹಳ್ಳಿ, ಈ ಸಂಘಕ್ಕೆ ರೂ. 13,000–00 ಗಳಿಗೆ ಮಾರಾಟ ಮಾಡಿ ಬಂದ ಹಣದಿಂದ ಸರ್ಕಾರದ ಷೇರು ರೂ. 11,000–00 ಗಳನ್ನು ಚಲನ್ ಸಂಖ್ಯೆ: 37 ಮತ್ತು 38 ಗಳಲ್ಲಿ ದಿನಾಂಕ: 07.04.2005 ರಲ್ಲಿ ಪಾವತಿಸಿರುತ್ತಾರೆ. ಸಂಘದಲ್ಲಿನ ನಿವೇಶನ ಹೊರತುಪಡಿಸಿ ಇತರೆ ಆಸ್ತಿಗಳಿಗೆ ಸಂಬಂಧಿಸಿದಂತೆ ಸಂಘದಲ್ಲಿ ದಾಖಲೆಗಳು, ವಿವರಗಳು ಮತ್ತು ಮಾಹಿತಿಗಳ ಅಲಭ್ಯತೆಯಿಂದಾಗಿ ಖರ್ಚು ಖಾತೆಗೆ ವರ್ಗಾಯಿಸಿರುತ್ತಾರೆ.

ಸಂಘದ ಸಮಾಪನಾಧಿಕಾರಿಯವರು ದಿನಾಂಕ: 30.06.2005 ರ ಅಂತ್ಯಕ್ಕೆ ತಾತ್ಕಾಲಿಕ ಜಮಾ–ಖರ್ಚು, ಲಾಭ–ನಷ್ಟದ ಹಾಗೂ ಶೂನ್ಯ ಆಸ್ತಿ–ಜವಾಬ್ದಾರಿ ತಃಖ್ತೆ ತಯಾರಿಸಿ ಸಲ್ಲಿಸಿ, ಸಂಘದ ನೊಂದಣಿ ರದ್ದುಪಡಿಸಲು ಕೋರಿರುತ್ತಾರೆ. ಸದರಿ ಕೋರಿಕೆಯನ್ನು ಶಿಫಾರಸ್ಸು ಮಾಡಿ ಸಂಘದ ನೊಂದಣಿ ಸಂಖ್ಯೆ ರದ್ಧತಿಗೆ ಉಲ್ಲೇಖ (2) ರಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ದಿನಾಂಕ: 30.06.2005 ರ ಅಂತ್ಯಕ್ಕೆ ತಾತ್ಕಾಲಿಕ ಜಮಾ–ಖರ್ಚು, ಲಾಭ–ನಷ್ಟದ ಹಾಗೂ ಶೂನ್ಯ ಆಸ್ತಿ–ಜವಾಬ್ದಾರಿ ತಃಖ್ತೆ ತಯಾರಿಸಿ ಸಲ್ಲಿಸಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ : 69 : ಸಿಎಲ್ಎಂ : 2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಕೆ.ಹೆಚ್. ತಿಮ್ಮಯ್ಯ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಸಮಾಪನೆಯಲ್ಲಿರುವ ಶ್ರೀ ಮೈಲಾರಲಿಂಗೇಶ್ವರ ಉಣ್ಣೆ ಕೈಮಗ್ಗದ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿಯಮಿತ, ಐ.ಡಿ.ಹಳ್ಳಿ, ಮಧುಗಿರಿ ತಾಲ್ಲೂಕು, ಇದರ ನೋಂದಣಿ ಸಂ: ಎಆರ್‌ಬಿ : 787 : 54–55, ದಿನಾಂಕ: 03.03.1955 ಅನ್ನು ರದ್ದುಗೊಳಿಸಿ ಈ ಮೂಲಕ ಆದೇಶ ಹೊರಡಿಸಿರುತ್ತೇನೆ. ಈ ರದ್ದತಿಯನ್ವಯ ಸದರಿ ಸಂಘವು ವಿಸರ್ಜಿಸಲ್ಪಟ್ಟಿತ್ತೆಂದು ಮತ್ತು ಸದರಿ ಸಂಘದ ಅಸ್ತಿತ್ವ ಇಲ್ಲವೆಂದು ಪರಿಗಣಿಸತಕ್ಕದ್ದು. ಈ ಆದೇಶವು ಕೂಡಲೇ ಜಾರಿಗೆ ಬರುವುದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ 31.03.2006 ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್. 772

**ಜಿಲ್ಲಾಧಿಕಾರಿಗಳ ಕಾರ್ಯಾಲಯ ಕೋಲಾರ ಜಿಲ್ಲೆ, ಕೋಲಾರ**

**ಅಧಿಸೂಚನೆ**

**ನಂ: ಎಲ್ಆರ್‌ಎಫ್ (ಕಲಂ 109) ಸಿಆರ್ 17 : 2005–06, ದಿನಾಂಕ 27ನೇ ಮಾರ್ಚ್ 2006.**

ಗೌರಿಬಿದನೂರು ತಾಲ್ಲೂಕು ನಗರಗೆರೆ ಹೋಬಳಿ ಜಿ. ಕೊತ್ತೂರು ಗ್ರಾಮದ ಸ.ನಂ. 304 ರ ಪೈಕಿ 1 ಎಕರೆ 19 ಗುಂಟೆ ಸ.ನಂ. 306 ರಲ್ಲಿ 4ಎ 29 ಗುಂಟೆ ಮತ್ತು ಸ.ನಂ. 307 ರಲ್ಲಿ 3ಎ 39 ಗುಂಟೆ ಹೀಗೆ ಒಟ್ಟು 10–07 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109(1) ರ ಅಡಿಯಲ್ಲಿ ಅನುಮತಿ ನೀಡಲು ಕೋರಿ ಸ್ಥಾಪಕರು (Author) ಶ್ರೀ ಶಾರದಾ ದೇವಿ ಸೇವಾ ಪ್ರತಿಷ್ಟಾನಾ ಟ್ರಸ್ಟ್ ವಿನಾಯಕ ನಗರ, ಬೆಂಗಳೂರು ರವರು ನಮೂನೆ 15ಎ ರಲ್ಲಿ ಅರ್ಜಿಯನ್ನು ಅಗತ್ಯ ದಾಖಲೆಗಳೊಂದಿಗೆ ಸಲ್ಲಿಸಿರುವ ಸಂಬಂಧ ತಹಶೀಲ್ದಾರ್ ಗೌರಿಬಿದನೂರು ತಾಲ್ಲೂಕು ರವರ ಪತ್ರ ಸಂಖ್ಯೆ LRF CR 61/ 2005-06 ದಿನಾಂಕ 02–03–2006 ರಂತೆ ಕಡತ ತಯಾರಿಸಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಸಹಾಯಕ ಕಮಿಷನರ್ ಚಿಕ್ಕಬಳ್ಳಾಪುರ ಉಪ ವಿಭಾಗರವರು ಪರಿಶೀಲಿಸಿ ಅರ್ಜಿದಾರರಿಗೆ ಮೇಲ್ಕಂಡ ಜಮೀನನ್ನು ಪ್ರಸ್ತಾಪಿತ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಅನುಮತಿಯನ್ನು ನೀಡಲು ವರದಿ ಸಂ. ಎಲ್ಆರ್‌ಎಫ್.ಸಿಆರ್ 83 : 2005–06 ದಿನಾಂಕ 6.3.2006 ರಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಪ್ರಸ್ತಾಪಿತ ಜಮೀನುಗಳ ಖಾತೆ ಶ್ರೀಮತಿ ಪ್ರಭಾವತಿ ಕೋಂ ಬಿ. ವೆಂಕಟಶಿವಾರೆಡ್ಡಿ ಎಂಬುವವರ ಹೆಸರಿನಲ್ಲಿ ಇರುತ್ತೆ. ಈ ಜಮೀನುಗಳನ್ನು ಅರ್ಜಿದಾರರಿಗೆ ದಾನವಾಗಿ ನೀಡಲು ಒಪ್ಪಿ ಕರಾರು ಪತ್ರವನ್ನು ಬರೆಸಿಕೊಟ್ಟಿರುತ್ತಾರೆ. ಮೇಲ್ಕಂಡ ಜಮೀನುಗಳು ಹಿಡುವಳಿ ಜಮೀನುಗಳಾಗಿರುತ್ತೆ. ಈ ಜಮೀನುಗಳು ಭೂ ಮಂಜೂರಾತಿ ನಿಯಮ / ಕರ್ನಾಟಕ ಭೂ ಸುಧಾರಣೆ ಕಾಯ್ದೆ / ಇನಾಂ ರದ್ಧಿಯಾತಿ ಕಾಯ್ದೆ ಮತ್ತು ಪಿ.ಟಿ.ಸಿ.ಎಲ್. ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮೇಲ್ಕಂಡ ಜಮೀನುಗಳ ಬಗ್ಗೆ ಯಾರೂ ಗೇಣಿ ಅರ್ಜಿಗಳನ್ನು ಸಲ್ಲಿಸಿರುವುದಿಲ್ಲ. ಹಾಗೂ ಪ್ರಸ್ತಾಪಿತ ಜಮೀನುಗಳು ಯಾರಿಗೂ ಪರಬಾರೆಯಾಗಿರುವುದಿಲ್ಲ.

ಶ್ರೀ ಶಾರದಾ ದೇವಿ ಸೇವಾ ಪ್ರತಿಷ್ಠಾನಾ ಟ್ರಸ್ಟ್ ಹಿರಿಯ ಉಪ ನೋಂದಣಾಧಿಕಾರಿಗಳು ಕೆಂಗೇರಿ ಬೆಂಗಳೂರು ರವರ ಕಛೇರಿಯಲ್ಲಿ ನಂ. ಬಿಎನ್‌ಜಿ (ಯು) ಕೆಎನ್‌ಎಸ್‌ಆರ್ / 306 / 2005-06 ದಿನಾಂಕ 8.9.2005 ರಂತೆ ನೋಂದಾವಣೆಯಾಗಿರುತ್ತೆ. ಅರ್ಜಿದಾರರು ಮೇಲ್ಕಂಡ ಜಮೀನುಗಳನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಉದ್ದೇಶಿಸಿದ್ದು ಇವರು ನಮೂನೆ 15ಎ ರೊಂದಿಗೆ ಸಲ್ಲಿಸಿರುವ ದಾಖಲೆಗಳು ಪ್ರಸ್ತಾಪಿತ ಉದ್ದೇಶಕ್ಕೆ ಪೂರಕವಾಗಿರುತ್ತೇದೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (1) (ii) ರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 4 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ 23.04.2003 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) ಕ್ಕೆ ತಿದ್ದುಪಡಿಯನ್ನು ತಂದಿರುತ್ತೆ. (ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 2002) ಇದರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 2 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಕ್ರಯಕ್ಕೆ ಪಡೆಯಲು / ದಾನವಾಗಿ ಪಡೆಯಲು ಅನುಮತಿ / ವಿನಾಯ್ತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ (1) (ii) ಕ್ಕೆ ಅನುಗುಣವಾಗಿರುವುದರಿಂದ ಗೌರಿಬಿದನೂರು ತಾಲ್ಲೂಕು ನಗರಗೆರೆ ಹೋಬಳಿ ಜಿ. ಕೊತ್ತೂರು ಗ್ರಾಮದ ಸ.ನಂ.304 ರ ಪೈಕಿ 1 ಎಕರೆ 19 ಗುಂಟೆ ಸ.ನಂ. 306 ರಲ್ಲಿ 4ಎ 29 ಗುಂಟೆ ಮತ್ತು ಸ.ನಂ. 307 ರಲ್ಲಿ 3ಎ 39 ಗುಂಟೆ ಹೀಗೆ ಒಟ್ಟು 10-07 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಸ್ಥಾಪಕರು (Author) ಶ್ರೀ ಶಾರದಾ ದೇವಿ ಸೇವಾ ಪ್ರತಿಷ್ಠಾನಾ ಟ್ರಸ್ಟ್, ವಿನಾಯಕ ನಗರ, ಬೆಂಗಳೂರು ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (1) (ii) ರ ಅಡಿಯಲ್ಲಿ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನುಗಳನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ : ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರ್ ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗಧಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ. : ಓಡಿಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ಥಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961 ರ ಕಲಂ 109 (1) (ii) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಜಿಲ್ಲಾಧಿಕಾರಿಗಳು,

ಪಿ.ಆರ್. 773 ಕೋಲಾರ ಜಿಲ್ಲೆ.

**ಜಿಲ್ಲಾಧಿಕಾರಿಗಳ ಕಚೇರಿ, ಉಡುಪಿ ಜಿಲ್ಲೆ**

**ಅಧಿಸೂಚನೆ**

**ನಂ: ಆರ್‌ಟಿಎ ಸಿಆರ್ 93 / 2005–06, ದಿನಾಂಕ 28ನೇ ಮಾರ್ಚ್ 2006.**

ಕುಂದಾಪುರ ಪುರಸಭೆ ವ್ಯಾಪ್ತಿಯ ಶಾಸ್ತ್ರಿ ಸರ್ಕಲ್‌ನಿಂದ ಪಾರಿಜಾತ ಸರ್ಕಲ್ ರಸ್ತೆಯ ಮಧ್ಯದ ವಿಭಾಜಕ ಹೊರತುಪಡಿಸಿ 2 ಬದಿಯಲ್ಲಿ ತಲಾ 7ಮೀ ಅಗಲಕ್ಕೆ ಕಾಂಕ್ರೀಟೀಕರಣ ಕಾಮಗಾರಿಯನ್ನು ಎಡಿಬಿ ಯೋಜನೆಯಡಿಯಲ್ಲಿ ಕುಡ್ಸೆಂಪು ವತಿಯಿಂದ ಕೈಗೆತ್ತಿಕೊಂಡು ಸದ್ರಿ ರಸ್ತೆಯ ಕಾಮಗಾರಿ ನಿರ್ವಹಣೆ ಸಂಬಂಧದಲ್ಲಿ ಕಾಮಗಾರಿ ಮುಗಿಯುವವರೆಗೆ ಸದ್ರಿ ರಸ್ತೆಯಲ್ಲಿ ಘನ ವಾಹನಗಳ (ಬಸ್ಸು ಟ್ರಕ್ಕುಗಳು) ಸಂಚಾರವನ್ನು ತಾತ್ಕಾಲಿಕವಾಗಿ ರದ್ದುಪಡಿಸಲು ಯಾ ನಿಷೇಧಿಸುವಂತೆ ಹಾಗೂ ಸದ್ರಿ ರಸ್ತೆಯಲ್ಲಿ ಸಂಚರಿಸುವ ಘನ ವಾಹನಗಳ ನಿಲುಗಡೆಗಾಗಿ ಕಾಂಕ್ರೀಟೀಕರಣ ಕಾಮಗಾರಿಯು ಮುಗಿಯುವವರೆಗೆ ಶಾಸ್ತ್ರಿ ಸರ್ಕಲ್‌ನ ಸಮೀಪದಲ್ಲಿರುವ ಗಾಂಧಿ ಮೈದಾನದಲ್ಲಿ ವಾಹನಗಳ ನಿಲ್ದಾಣ ಕಲ್ಪಿಸಿ ಘನ ವಾಹನಗಳ ನಿಲುಗಡೆಗೆ ಅವಕಾಶ ಮಾಡಿಕೊಡಬೇಕೆಂದು ಅಧಿಸೂಚನೆ ಆದೇಶ ಹೊರಡಿಸಲು ಕುಂದಾಪುರ ಪುರಸಭೆ ಮುಖ್ಯಾಧಿಕಾರಿಯವರು ಕೋರಿರುತ್ತಾರೆ.

ಈ ವಿಷಯವಾಗಿ ಉಡುಪಿ ಜಿಲ್ಲಾ ಪೋಲೀಸ್ ಇಲಾಖಾಧಿಕಾರಿಗಳು ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ಉಡುಪಿ ರವರಲ್ಲಿ ಪರಿಶೀಲನೆ ವರದಿಯನ್ನು ಕೇಳಲಾಗಿ, ಜಿಲ್ಲಾ ಪೋಲೀಸ್ ಅಧಿಕಾರಿಗಳು ಸದ್ರಿ ರಸ್ತೆಯಲ್ಲಿ ಘನ ವಾಹನಗಳು (ಬಸ್ಸು, ಟ್ರಕ್ಕುಗಳು) ಹೊರತು ಪಡಿಸಿ ಲಘು ವಾಹನಗಳು ಏಕಮುಖವಾಗಿ ಸಂಚರಿಸಬಹುದಾಗಿ, ಹಾಗೂ ಸದ್ರಿ ರಸ್ತೆಯಲ್ಲಿ ಸಂಚರಿಸುವ ಘನ ವಾಹನಗಳ ನಿಲುಗಡೆಯನ್ನು ಪುರಸಭೆಯವರು ಕಲ್ಪಿಸಿದ ಗಾಂಧಿ ಮೈದಾನದಲ್ಲಿ ತಾತ್ಕಾಲಿಕವಾಗಿ ನಿಲುಗಡೆ (ನಿಲ್ದಾಣ) ಮಾಡಬಹುದಾಗಿ ಅಭಿಪ್ರಾಯಿಸಿ ವರದಿಸಿರುತ್ತಾರೆ. ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ಕೂಡಾ ಅವರ ವರದಿಯಲ್ಲಿ ಸಹಮತ ವ್ಯಕ್ತಪಡಿಸಿರುತ್ತಾರೆ. ಮತ್ತು ಸದ್ರಿ ಕಾಮಗಾರಿ ನಿರ್ವಹಣೆ ಸಮಯದಲ್ಲಿ ಈ ರಸ್ತೆಯಲ್ಲಿ ಸಂಚರಿಸುವ ಮಜಲು ವಾಹನಗಳ ನಿಲ್ದಾಣಕ್ಕೆ (ನಿಲುಗಡೆಗೆ) ಶಾಸ್ತ್ರಿ ವಲಯದ ಸಮೀಪದಲ್ಲಿಯ ಗಾಂಧಿ ಮೈದಾನದಲ್ಲಿ ಅವಕಾಶ ಕಲ್ಪಿಸಬಹುದಾಗಿ ಅಭಿಪ್ರಾಯಿಸಿ ವರದಿ ನೀಡಿರುತ್ತಾರೆ.

ಪೊಲೀಸು ಅಧೀಕ್ಷಕರು, ಉಡುಪಿ ಜಿಲ್ಲೆ, ಮತ್ತು ಜಿಲ್ಲಾ ಪ್ರಾದೇಶಿಕ ಅಧಿಕಾರಿಯವರ ವರದಿಯನ್ನು ಪರಿಶೀಲಿಸಿ. ಸದ್ರಿ ಕಾಮಗಾರಿಯ ನಿರ್ವಹಣೆಯ ಸಂದರ್ಭದಲ್ಲಿ ಈ ರಸ್ತೆಯಲ್ಲಿ ಸಂಚರಿಸುವ ವಾಹನ ಸಂಚಾರಕ್ಕೆ ಅಡಚಣೆ ಆಗುವುದನ್ನು ಮನಗಂಡು, ಸಾರ್ವಜನಿಕ ಹಿತ ದೃಷ್ಟಿಯಿಂದ ಸದ್ರಿ ರಸ್ತೆಯಲ್ಲಿ ಸಂಚರಿಸುವ ವಾಹನಗಳ ಸುಗಮ ಸಂಚಾರಕ್ಕೆ ಈ ಕೆಳಗಿನಂತೆ ವ್ಯವಸ್ಥೆ ಕಲ್ಪಿಸಿ, ಈ ರಸ್ತೆಯಲ್ಲಿ ಸಂಚರಿಸುವ ಘನ ವಾಹನಗಳ ಸಂಚಾರ ನಿಷೇಧಿಸುವುದು ಅವಶ್ಯಕವೆಂದು ಮನಗಂಡು, ಶ್ರೀ ಆರ್. ಶಾಂತರಾಜ್, ಕ.ಆ.ಸೇ. ಜಿಲ್ಲಾ ದಂಡಾಧಿಕಾರಿ, ಉಡುಪಿ ಜಿಲ್ಲೆ ಆದ ನಾನು ಮೋಟಾರು ವಾಹನ ಕಾಯ್ದೆ 1988 ರ ಸೆಕ್ಷನ್ 115 ಮತ್ತು 117 ಹಾಗೂ ಕರ್ನಾಟಕ ವಾಹನ ನಿಯಮಾವಳಿ 1989 ರ ನಿಯಮ 221 ಎ (6) ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಧಿಸೂಚನೆಯನ್ನು ಹೊರಡಿಸಿರುತ್ತೇನೆ.

1. ಕುಂದಾಪುರ ಶಾಸ್ತ್ರೀ ಪಾರ್ಕ್ ನಿಂದ ಹೊರಟು ಪರಿಜಾತ ವೃತ್ತ – ಸರಕಾರಿ ಕಾಲೇಜು – ಹಳೆ ಬಸ್ಸು ನಿಲ್ದಾಣ, ಹೊಸ ಬಸ್ಸು ನಿಲ್ದಾಣ – ವಾಪಾಸ್ಸು ಮುನ್ಸಿಪಾಲ್ ರಸ್ತೆ – ಎಡಕಡೆಗೆ ತಿರುಗಿ ಚಿಕ್ಕನ್ ಸಾಲು ರಸ್ತೆ – ಸಂಗಮ್ ಜಂಕ್ಷನ್ – ರಾಷ್ಟ್ರೀಯ ಹೆದ್ದಾರಿ – 17 ಶಾಸ್ತ್ರಿ ಪಾರ್ಕ್‌ಗೆ ಬರುವುದು.
2. ಶಾಸ್ತ್ರೀ ಪಾರ್ಕ್ ನಿಂದ ಖಾಸಗಿ ಬಸ್ಸು ಹಾಗೂ ಸರಕಾರಿ ಬಸ್ಸುಗಳು ಹೊರತುಪಡಿಸಿ ಉಳಿದ ವಾಹನಗಳು ಏಕಮುಖ ಸಂಚಾರದಲ್ಲಿ ಚಲಿಸುವುದು.
3. ಎಲ್ಲಾ ಖಾಸಗಿ ಹಾಗೂ ಸರಕಾರಿ ಬಸ್ಸುಗಳು ಶಾಸ್ತ್ರೀ ಪಾರ್ಕ್‌ನಿಂದ ವಾಪಾಸು ಹೋಗಿ ಕುಂದಾಪುರ ಗಾಂಧಿ ಮೈದಾನದಲ್ಲಿ ತಾತ್ಕಾಲಿಕ ನಿಲುಗಡೆ ಮಾಡುವುದು.

ಈ ಬಗ್ಗೆ ಮೋಟಾರು ವಾಹನಗಳ ಕಾಯ್ದೆ 1988ರ ಸೆಕ್ಷನ್ 116 ಹಾಗೂ ಕರ್ನಾಟಕ ಮೋಟಾರು ವಾಹನ ನಿಯಮಾವಳಿ 1989 ರ ನಿಯಮ 221 (ಎ) 2 ರಲ್ಲಿ ತಿಳಿಸಿರುವಂತೆ ಅವಶ್ಯವಿರುವ ಸೂಚನಾ ಫಲಕಗಳನ್ನು ಅಳವಡಿಸಿ ಅಧಿಸೂಚನೆಯನ್ನು ಕಟ್ಟು ನಿಟ್ಟಿನಿಂದ ಅನುಷ್ಠಾನಕ್ಕೆ ತರಲು ಸೂಕ್ತ ಕ್ರಮವಹಿಸುವರೆ ಜಿಲ್ಲಾ ಪೋಲೀಸ್ ಅಧೀಕ್ಷಕರು, ಉಡುಪಿ ಜಿಲ್ಲೆ ಇವರಿಗೆ ಅಧಿಕಾರ ನೀಡಲಾಗಿದೆ.

ಮೇಲಿನ ಅಧಿಸೂಚನೆ ಆದೇಶವು ದಿನಾಂಕ: 28.3.2006 ರಿಂದ ಕಾಮಗಾರಿ ಮುಕ್ತಾಯವಾಗುವವರೆಗೆ ಜ್ಯಾರಿಯಲ್ಲಿರುತ್ತದೆ.

ಈ ಅಧಿಸೂಚನೆಯನ್ನು ದಿನಾಂಕ 28.3.2006 ರಂದು ನನ್ನ ಸ್ವಹಸ್ತ ಮತ್ತು ಮುದ್ರೆಯೊಂದಿಗೆ ಹೊರಡಿಸಿದೆ.

ಜಿಲ್ಲಾ ದಂಡಾಧಿಕಾರಿ,
ಉಡುಪಿ ಜಿಲ್ಲೆ.

ಪಿ.ಆರ್. 774

**ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರ ಕಾರ್ಯಾಲಯ, ಮೈಸೂರು**

**ಅಧಿಸೂಚನೆ**

**ಸಂಖ್ಯೆ: ಸಿವಿ(1) : 413 : 2005-06, ದಿನಾಂಕ 03ನೇ ಏಪ್ರಿಲ್ 2006.**

ಡಾ: ಕೆ.ಎಸ್. ಕಿರಣ್‌ಕುಮಾರ್, ಆಡಳಿತ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಗಾವಡಗೆರೆ, ಹುಣಸೂರು ತಾಲ್ಲೂಕು ರವರಿಗೆ ದಿನಾಂಕ: 2.3.2006 ರಿಂದ 31.3.2006 ರವರೆಗೆ 30 ದಿನಗಳ ಗಳಿಕೆ ರಜೆಯನ್ನು 2005-06ನೇ ಸಾಲಿಗೆ ನಗಧೀಕರಿಸಲು ಒಪ್ಪಿಸಿರುವುದನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ : 22 : ಎಸ್‌ಆರ್‌ಎಸ್ : 2004, ದಿನಾಂಕ: 8.4.2005ರ ಪ್ರಕಾರ ಮಂಜೂರು ಮಾಡಿ ನಗಧೀಕರಿಸಲು ಒಪ್ಪಿಕೊಳ್ಳಲಾಗಿದೆ.

ಜಿಲ್ಲಾ ಆರೋಗ್ಯ ಮತ್ತು ಕುಟುಂಬ
ಪಿ.ಆರ್. 775 ಕಲ್ಯಾಣಾಧಿಕಾರಿಗಳು, ಮೈಸೂರು.

**ಕಾರ್ಯನಿರ್ವಾಹಕ ನಿರ್ದೇಶಕರು, ಹುಲಿ-ಸಿಂಹಧಾಮ, ತ್ಯಾವರೆಕೊಪ್ಪ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಪ್ರಕಟಣೆ**

**ಸಂಖ್ಯೆ: ಎ2 : ಸಿಜಡ್ : 127 / 2001-02, ದಿನಾಂಕ: 22ನೇ ಏಪ್ರಿಲ್ 2006**

ಕರ್ನಾಟಕ ಮೃಗಾಲಯ ಪ್ರಾಧಿಕಾರ ಮೈಸೂರು ಇವರು ಹೊರಡಿಸಿದ ಅಧಿಸೂಚನೆ ಸಂಖ್ಯೆ: ಎಂಎಸ್‌ವೈ : 10/97/ಇಎಫ್/2006/34 ದಿನಾಂಕ: 15.04.2006 ರಲ್ಲಿ ಹುಲಿ-ಸಿಂಹಧಾಮ, ತ್ಯಾವರೆಕೊಪ್ಪದ ಪ್ರವೇಶ ಶುಲ್ಕ ಹಾಗೂ ಸಫಾರಿ ದರಗಳಲ್ಲಿ ದಿನಾಂಕ: 01.05.2006 ರಿಂದ ಅನ್ವಯವಾಗುವಂತೆ ಪರಿಷ್ಕರಿಸಿರುತ್ತಾರೆ. ವಿವರ ಕೆಳಕಂಡಂತಿದ್ದು ಇದನ್ನು ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

| ಕ್ರ.ಸಂ. | ವಿವರ | ಪ್ರವೇಶ ಶುಲ್ಕ | |
|---|---|---|---|
| | | ಪ್ರಸ್ತುತ ಇರುವ ದರ | ಪರಿಷ್ಕರಿಸಿದ ದರ 01.05.2006 ರಿಂದ ಅನ್ವಯವಾಗುವಂತೆ |
| ಮುಖ್ಯದ್ವಾರದ ಪ್ರವೇಶ ಶುಲ್ಕ | | | |
| 1 | ವಯಸ್ಕರಿಗೆ | ರೂ. 5.00 | ರೂ. 6.00 |
| 2 | ಮಕ್ಕಳಿಗೆ | ರೂ. 3.00 | ರೂ. 4.00 |
| ಸಫಾರಿ ಪ್ರವೇಶ ಶುಲ್ಕ | | | |
| 1 | ವಯಸ್ಕರಿಗೆ | ರೂ. 25.00 | ರೂ. 30.00 |
| 2 | ಮಕ್ಕಳಿಗೆ | ರೂ. 10.00 | ರೂ. 12.00 |
| 3 | ವಿದೇಶಿಯರಿಗೆ | ರೂ. 150.00 | ರೂ. 180.00 |

ವಾಹನ ನಿಲುಗಡೆಯ ಹಾಗೂ ಇತರೆ ಶುಲ್ಕಗಳ ದರದಲ್ಲಿ ಯಾವುದೇ ಬದಲಾವಣೆಯಾಗದೆ ದಿನಾಂಕ: 26.02.2004ರ ಅಧಿಸೂಚನೆಯಲ್ಲಿ ನಿಗದಿ ಪಡಿಸಿದ ದರವನ್ನೇ ಮುಂದುವರಿಸಲಾಗಿದೆ.

ಕಾರ್ಯನಿರ್ವಾಹಕ ನಿರ್ದೇಶಕರು,
ಪಿ.ಆರ್. 833 ಹುಲಿ-ಸಿಂಹಧಾಮ, ತ್ಯಾವರೆಕೊಪ್ಪ, ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್.ಆರ್.ಎಫ್ (ಎನ್.ಎ) ಸಿ.ಆರ್: 63 / 05-06, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2005**

**ವಿಷಯ:** ಕರ್ನಾಟಕ ಎಜುಕೇಷನಲ್ ಸೊಸೈಟಿ, ನಂ. 121, ಜೆ.ಪಿ. ನಗರ, ಬೆಂಗಳೂರು-78, ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರುಘಟ್ಟ ಹೋಬಳಿ, ಇಟಗಲ್‌ಪುರ ಗ್ರಾಮದ ಸ.ನಂ. 81/2 ರಲ್ಲಿ 3.20 ಎಕರೆ : ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಕರ್ನಾಟಕ ಎಜುಕೇಷನಲ್ ಸೊಸೈಟಿ, ನಂ. 121, ಜೆ.ಪಿ. ನಗರ, ಬೆಂಗಳೂರು-78 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಇಟಗಲ್‌ಪುರ ಗ್ರಾಮದ ಸ.ನಂ. 81/2 ರಲ್ಲಿ 3.20 ಎಕರೆ : ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ: ಎಲ್.ಎನ್.ಡಿ:ಸಿಆರ್: 86/05-06, ದಿನಾಂಕ: 9.9.2005 ರಲ್ಲಿ ಪ್ರಸ್ತಾಪಿತ ಇಟಗಲ್‌ಪುರ ಗ್ರಾಮದ ಸ.ನಂ. 81/2 ರಲ್ಲಿ 3.20 ಎಕರೆ : ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (1) (11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಂಘ ಸಂಸ್ಥೆಗಳ ನೋಂದಣಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಈ ಕಛೇರಿಯಲ್ಲಿ ದಿನಾಂಕ: 16.2.76 ರಂದು ನೋಂದಾಯಿಸಲ್ಪಟ್ಟಿದೆ. ಖಾತೇದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (1) (11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ ಇಟಗಲ್‌ಪುರ ಗ್ರಾಮದ ಸ.ನಂ. 81/2 ರಲ್ಲಿ 3.20 ಎಕರೆ : ಗುಂಟೆ ಜಮೀನನ್ನು ಕರ್ನಾಟಕ ಎಜುಕೇಷನಲ್ ಸೊಸೈಟಿ, ನಂ. 121, ಜೆ.ಪಿ.ನಗರ, ಬೆಂಗಳೂರು-78 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ಕಂಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನನ್ನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವರಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964 ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ., ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 776

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

**ನಂ: ಎಲ್.ಆರ್.ಎಫ್ (ಎನ್.ಎ) ಸಿ.ಆರ್: 1 / 05-06, ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2006**

**ವಿಷಯ:** ನಿಜಶರಣ ಅಂಬಿಗರ ಚೌಡಯ್ಯ ಮಹಾವಿದ್ಯಾಪೀಠ, ನಂ. 999, 1ನೇ ಕ್ರಾಸ್, ಕೆ.ಹೆಚ್.ಬಿ. ರಸ್ತೆ, ಕಾವಲ್ ಬೈರಸಂದ್ರ, ಆರ್.ಟಿ. ನಗರ, ಬೆಂಗಳೂರು-32, ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಚೊಕ್ಕನಹಳ್ಳಿ ಗ್ರಾಮದ ಸ.ನಂ. 18/1 ರಲ್ಲಿ 0-20 ಗುಂಟೆ ಮತ್ತು ಸ.ನಂ. 18/2 ರಲ್ಲಿ 0-21 ಗುಂಟೆ ಒಟ್ಟು 1-01 ಎಕರೆ : ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಪಡೆಯಲು ಅನುಮತಿ ಕೋರಿರುವ ಬಗ್ಗೆ.

ನಿಜಶರಣ ಅಂಬಿಗರ ಚೌಡಯ್ಯ ಮಹಾವಿದ್ಯಾಪೀಠ, ನಂ. 999, 1ನೇ ಕ್ರಾಸ್, ಕೆ.ಹೆಚ್.ಬಿ. ರಸ್ತೆ, ಕಾವಲ್ ಬೈರಸಂದ್ರ, ಆರ್.ಟಿ. ನಗರ, ಬೆಂಗಳೂರು-32 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕಹೋಬಳಿ, ಚೊಕ್ಕನಹಳ್ಳಿ ಗ್ರಾಮದ ಸ.ನಂ. 18/1 ರಲ್ಲಿ 0-20 ಗುಂಟೆ ಮತ್ತು ಸ.ನಂ. 18/2 ರಲ್ಲಿ 0-21 ಗುಂಟೆ ಒಟ್ಟು 1-01 ಎಕರೆ : ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ: ಎಲ್.ಎನ್.ಡಿ:ಸಿಆರ್: 115/05-06, ದಿನಾಂಕ: 13.12.2005 ರಲ್ಲಿ ಪ್ರಸ್ತಾಪಿತ ಚೊಕ್ಕನಹಳ್ಳಿ ಗ್ರಾಮದ ಸ.ನಂ. 18/1 ರಲ್ಲಿ 0-20 ಗುಂಟೆ ಮತ್ತು ಸ.ನಂ. 18/2 ರಲ್ಲಿ 0-21 ಗುಂಟೆ ಒಟ್ಟು 1-01 ಎಕರೆ : ಗುಂಟೆ ಜಮೀನನ್ನು ಖರೀದಿಸಲು ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (1) (11) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳು, ಬೀದರ್ ಜಿಲ್ಲಾ ಸಂಸ್ಥೆ, ಬೀದರ್ ರಲ್ಲಿ ನೋಂದಣಿ ಸಂಖ್ಯೆ 61 / 2003-04, ದಿನಾಂಕ: 28.6.2003 ರಂದು ನೋಂದಾಯಿಸಲ್ಪಟ್ಟಿದೆ. ಖಾತೇದಾರರಿಂದ ಜಮೀನು ಖರೀದಿಸಲು ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (1) (11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಚೊಕ್ಕನಹಳ್ಳಿ ಗ್ರಾಮದ ಸ.ನಂ. 18/1 ರಲ್ಲಿ 0-20 ಗುಂಟೆ ಮತ್ತು ಸ.ನಂ. 18/2 ರಲ್ಲಿ 0-21 ಗುಂಟೆ ಒಟ್ಟು 1-01 ಎಕರೆ : ಗುಂಟೆ ಜಮೀನನ್ನು ನಿಜಶರಣ ಅಂಬಿಗರ ಚೌಡಯ್ಯ ಮಹವಿದ್ಯಾಪೀಠ, ನಂ. 999, 1ನೇ ಕ್ರಾಸ್, ಕೆ.ಹೆಚ್.ಬಿ. ರಸ್ತೆ, ಕಾವಲ್ ಬೈರಸಂದ್ರ, ಆರ್.ಟಿ. ನಗರ, ಬೆಂಗಳೂರು-32 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವೃಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನನ್ನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವರಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964 ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ., ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 777

## PROCEEDINGS OF THE REGISTRAR OF CO-OPERATIVE SOCIETIES IN KARNATAKA, BANGALORE

**No: LDB - 2 / 197 / DEB / 2005-06, Dated:29th March 2006**

Sub : Floatation of Special Development Debentures by the KSCA&RD Bank under various schemes for Rs.5,73,19,100/- issue of orders-reg.

Ref : (1) Proposal No:FS/DEB/425/2005-06 Dated: 9-1-2006 of the KSCA&RD Bank Ltd., Bangalore addressed to NABARD, Bangalore forwarding the proposal for Floatation of Special Development Debentures for Rs. 5,73,19,100/- for their approval.

(2) Letter No: NB(BL) / ICD / 11681 / LDB-12 / 2005-06 Dated:29-3-2006 of the NABARD, Bangalore addressed to the Managing Director, KSCA&RD Bank, under copy to the Registrar of Co-operative Societies in Karnataka, Bangalore conveying their approval to the proposal cited above at 1, for Rs. 5,73,19,100/-

(3) Government O.M. No. FD. 95. RLG; 68 Dated: 11-11-1971

(4) Letter No. CMW: 192 : CLS 1998, Bangalore Dated:16-6-1999 sanctioning the Government Guarantee for Rs.1442.00 crores on behalf of the KSCA&RD Bank for the years 1999-2000 to 2001-02.

(5) Govt., letter No. FD 159 INV 2005 Dated:9-5-2005 extending the period of the guarantee up to 31-3-2006 for Rs.1325 crores.

(6) Proposal No. FS/DEB/561/2005-06, Dated: 29-3-2006 of the KSCA & RD Bank, addressed to this office requesting to issue of orders for the floatation of the debentures approved by the NABARD as cited in Ref.2 above.

**PREAMBLE:**

The Karnataka State Co-operative Agriculture and Rural Development Bank Ltd., in its letter cited (1) has forwarded a proposal to the National Bank for Agriculture and Rural Development, Bangalore for

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 10 | ಡಾ: ಹೆಚ್.ಆರ್. ಹರೀಂದ್ರನಾಥ್ | –ಅದೇ– | 16–3–1963 | 16–6–2000 | ಅದೇ | 16–6–2000 | |
| 11 | ಡಾ: ಎಂ.ಬಿ.ಅಜಿತ | –ಅದೇ– | 13–8–1969 | 20–1–2001 | ಅದೇ | 20–1–2001 | |
| 12 | ಡಾ: ಹೆಚ್.ಎನ್. ದಿನೇಶ್ | ವಿಷಯ ಬದಲಾವಣೆ | 15–10–1970 | 5–7–2000 | ಅದೇ | 11–12–2002 | |
| 13 | ಡಾ: ಮೀರ್ ಮಹಮ್ಮದ್ ನೂರುಲ್ ಹಸನ್ | ವಿಷಯ ಬದಲಾವಣೆ | 27–11–1968 | 22–9–2000 | ಅದೇ | 15–2–2005 | |
| 14 | ಡಾ: ಸುಭಾಷ್ ಸಿದ್ದಪ್ಪ ಹಾದಿಮನಿ | ವೃಂದ ಬದಲಾವಣೆ | 30–3–1948 | 23–1–1984 | ಅನ್ವಯಿಸು–ವುದಿಲ್ಲ | 8–12–2005 | |
| 15 | ಡಾ: ರವಿಕರ್ ಜಯರಾಜ್ | ವೃಂದ ಬದಲಾವಣೆ | 9–7–1957 | 1–3–1985 | ಅದೇ | | |
| 16 | ಡಾ: ಸಿ.ಕೆ.ಶಶಿಕಲಾ | –ಅದೇ– | 4–5–1958 | 19–12–1987 | ಅದೇ | 27–10–2005 | |
| 17 | ಡಾ: ವಿ.ಶಶಿಕಲಾ | –ಅದೇ– | 30–8–1961 | 29–2–1988 | ಅದೇ | 27–10–2005 | |
| 18 | ಡಾ: ರಾಜಶೇಖರ್ ಬಾಬು | –ಅದೇ– | 20–7–1962 | 30–8–1988 | ಅದೇ | 7–11–2005 | |
| 19 | ಡಾ: ಎಸ್.ಆರ್.ರಘು | –ಅದೇ– | 22–7–1969 | 18–8–1997 | –ಅದೇ– | 7–1–2006 | |
| 20 | ಡಾ: ಎ.ಸಿ.ಗಿರೀಶ್ | –ಅದೇ– | 12–6–1974 | 7–9–2005 | –ಅದೇ– | 7–1–2006 | |
| 21 | ಡಾ: ಆರ್. ಪೂರ್ಣಿಮಾ | ವಿಷಯ ಬದಲಾವಣೆ | 8–1–1972 | 19–3–2001 | –ಅದೇ– | 14–11–2005 | |
| | | | | ಓ.ಬಿ.ಜಿ. ವಿಭಾಗ | | | |
| 1 | ಡಾ: ಮಮ್ತಾಜ್ ದಾವೂದ್ ಬೆಂಡಿಗೇರಿ | ಕೆ.ಪಿ.ಎಸ್.ಸಿ | 4–2–1954 | 9–9–1981 | ಅನ್ವಯಿಸು–ವುದಿಲ್ಲ | 8–6–1982 | 18–5–2000 ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) |
| 2 | ಡಾ: ಗೋಪಾಲಕೃಷ್ಣ ಬಿ.ಹುಯಿಲ್ ಗೋಳ | ಅದೇ | 1–6–1963 | 25–5–2000 | ಅದೇ | 25–5–2000 | |
| 3 | ಡಾ: ತ್ರಿಶೂಲ ಗುರುನಾಥ್ ಜೋಶಿ | ವೃಂದ ಬದಲಾವಣೆ | 14–2–1951 | 16–3–1978 | ಅದೇ | 28–10–2005 | |
| 4 | ಡಾ: ಕೆ.ಮೇಧಾವಿ | ಅದೇ | 22–6–1951 | 8–5–1978 ಸ್ಥಳೀಯ ಅಭ್ಯರ್ಥಿ 20–2–85 ಕೆಪಿಎಸ್.ಸಿ. ಸಹಾಯಕ ಶಸ್ತ್ರಚಿಕಿತ್ಸಕರು | ಅದೇ | 3–11–2005 | |
| 5 | ಡಾ: ಎಂ.ಎ.ಚಿನಿವಾರ | ಅದೇ | 14–4–1953 | 1–3–1985 | ಅದೇ | 3–11–2005 | |
| 6 | ಡಾ: ಆರ್.ಸಿ.ಪ್ರಮೀಳ | ಅದೇ | 21–7–1959 | 9–3–1985 | ಅದೇ | 3–11–2005 | |
| 7 | ಡಾ: ಜಿ. ಸುನಂದಾಬಾಯಿ | ಅದೇ | 2–2–1958 | 19–4–1985 | ಅದೇ | 28–10–2005 | |
| 8 | ಡಾ: ಕೆ.ಎಂ.ಸುನಂದ | ಅದೇ | 11–8–1960 | 17–7–1986 | ಅದೇ | 5–11–2005 | |
| 9 | ಡಾ: ಆರ್.ಸುಧಾ | ಅದೇ | 6–11–1966 | 11–10–1991 | ಅದೇ | 29–10–2005 | |
| 10 | ಡಾ: ಸುರೇಶ್ ಎಸ್.ಕಣಕಣ್ಣನವರ್ | ಅದೇ | 13–3–1962 | 22–8–1991 | ಅದೇ | 7–1–2006 | |
| | | | | ಇ.ಎನ್.ಟಿ. ವಿಭಾಗ | | | |
| 1 | ಡಾ: ಎಂ.ಮಹೇಶ್ ಬಾಬು | ಅದೇ | 25–2–1959 | 18–2–1987 | ಅದೇ | 2–11–1999 | 4–8–2000 ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) |
| 2 | ಡಾ: ಕೆ.ಎಂ.ಗೋವಿಂದೇಗೌಡ | ಅದೇ | 1–6–1955 | 12–4–1988 | ಅದೇ | 2–11–1999 | 8–8–2000 ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 3 | ಡಾ: ಬಿ.ವಿಶ್ವನಾಥ್ | ಅದೇ | 2–5–1952 | 23–8–1988 | ಅದೇ | | 19–9–2002 ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) |
| 4 | ಡಾ: ಎಂ.ಕೆ.ವೀಣಾಪಾಣಿ | ಅದೇ | 23–3–1962 | 21–2–1985 | ಅದೇ | 12–11–1999 | 26–5–2005 ಸಹಾಯಕ ಪ್ರಾಧ್ಯಾಪಕರು (ಸ್ವ.ಪ್ರ.) |
| 5 | ಡಾ: ಸತೀಶ್ ಎಸ್.ರಾಜು | ಕೆ.ಪಿ.ಎಸ್.ಸಿ. | 17–5–1969 | 25–5–2000 | ಅದೇ | 25–5–2000 | |
| 6 | ಡಾ: ಕೆ.ಎಲ್.ಶಿವಕುಮಾರ್ | ವೃಂದ ಬದಲಾವಣೆ | 20–5–1956 | 25–2–1985 | ಅದೇ | 28–10–2005 | |
| 7 | ಡಾ: ಜೆ.ಸೂರ್ಯನಾರಾಯಣ | ಅದೇ | 12–9–1956 | 28–2–1985 | ಅದೇ | 27–10–2005 | |
| 8 | ಡಾ: ಸರೋಜಮ್ಮ | ಅದೇ | 9–6–1954 | 9–4–1985 | ಅದೇ | 27–10–2005 | |
| 9 | ಡಾ: ಎಸ್.ಬಿ.ಪ್ರಕಾಶ್ | ಅದೇ | 31–8–1955 | 30–8–1988 | ಅದೇ | 29–10–2005 | |
| 10 | ಡಾ: ಬಿ.ವೈ.ಪ್ರವೀಣ್ ಕುಮಾರ್ | ಅದೇ | 16–8–1969 | 13–8–1997 | ಅದೇ | 29–10–2005 | |
| 11 | ಡಾ: ಸಿ.ರವಿಶಂಕರ್ | ಅದೇ | 18–3–1972 | 30–8–2002 | ಅದೇ | 27–10–2005 | |
| | | | **ಆರ್ಥೋಪೆಡಿಕ್ಸ್ ವಿಭಾಗ** | | | | |
| 1 | ಡಾ: ಎಸ್.ದೀಪಕ್ | ಕೆಪಿಎಸ್.ಸಿ | 1–3–1969 | 31–5–2000 | ಅದೇ | 31–5–2000 | 12–4–05 ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) |
| 2 | ಡಾ: ಸಿ.ಚಂದ್ರಶೇಖರ್ | ಅದೇ | 10–7–1970 | 12–6–2000 | ಅದೇ | 12–6–2000 | |
| 3 | ಡಾ: ನೀಲನಗೌಡ ವಿ.ಪೋಲೀಸ್ ಪಾಟೀಲ್ | ಅದೇ | 20–12–1974 | 13–6–2000 | ಅದೇ | 13–6–2000 | |
| 4 | ಡಾ: ಹೆಚ್.ಪಿ.ಶೋಭಾ | ಅದೇ | 25–11–1967 | 6–7–2000 | ಅದೇ | 6–7–2000 | |
| 5 | ಡಾ: ಕೆ.ವಿ. ಪುಟ್ಟಕೆಂಪರಾಜು | ಅದೇ | 18–9–1965 | 31–8–2000 | ಅದೇ | 31–8–2000 | 18–10–05 ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) |
| 6 | ಡಾ: ಪಿ.ವಿ.ಶರತ್ ಕುಮಾರ್ | ಅದೇ | 12–1–1975 | 7–8–2000 | ಅದೇ | 7–8–2000 | |
| 7 | ಡಾ: ಅಬ್ದುಲ್ ರವೂಫ್ | ವೃಂದ ಬದಲಾವಣೆ | 5–8–1952 | 23–1–1984 | ಅದೇ | 10–10–2000 | 18–10–05 ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) |
| 8 | ಡಾ: ಬಿ.ಎಸ್. ವನಮಾಲಿ | ಅದೇ | 10–10–1971 | 4–7–2000 | ಅದೇ | 3–1–2003 | |
| 9 | ಡಾ: ಪಿ.ಗೋಪಿನಾಥ್ | ಅದೇ | 12–8–1955 | 24–1–1984 | ಅದೇ | 29–10–2005 | |
| 10 | ಡಾ: ಹೆಚ್. ಮಂಜುನಾಥ್ | ಅದೇ | 25–4–1955 | 1–3–1985 | ಅದೇ | 28–10–2005 | |
| 11 | ಡಾ: ಬಿ.ವಿ.ಪಾಂಡುರಂಗ | ಅದೇ | 20–7–1959 | 1–4–1985 | ಅದೇ | 27–10–2005 | |
| 12 | ಡಾ: ವಿದ್ಯಾಧರ್ ಶಿವಯೋಗಿ ದೋಣಿಮಠ | ಅದೇ | 13–2–1960 | 1–8–1986 | ಅನ್ವಯಿಸು–ವುದಿಲ್ಲ | 8–12–2005 | |
| 13 | ಡಾ: ವಿ.ಜೆ. ಪುರುಷೋತ್ತಮ | ಅದೇ | 25–5–1961 | 7–9–1988 | ಅದೇ | 27–10–2005 | |
| 14 | ಡಾ: ಎಸ್.ರಾಮಚಂದ್ರ | ಅದೇ | 9–11–1959 | 1–3–1985 | ಅದೇ | 7–1–2006 | |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| ಸ್ಕಿನ್ ಅಂಡ್ ಎಸ್.ಟಿ.ಡಿ. ವಿಭಾಗ | | | | | | | |
| 1 | ಡಾ: ಕೆ.ಸರೋಜಿನಿ | ವೃಂದ ಬದಲಾವಣೆ | 13–11–1952 | 30–9–1980 | ಅನ್ವಯಿಸು–ವುದಿಲ್ಲ | 29–10–2005 | |
| 2 | ಡಾ: ಬಿ.ಲೀಲಾವತಿ | ಅದೇ | 10–1–1960 | 25–2–1985 | ಅದೇ | 27–10–2005 | |
| 3 | ಡಾ: ಕೆ.ಎಸ್. ಮಹದೇವ | ಅದೇ | 4–4–1955 | 1–3–1985 | ಅದೇ | 29–10–2005 | |
| 4 | ಡಾ: ಜೆ.ರಾಜು | ಅದೇ | 22–5–1962 | 3–11–1987 | ಅದೇ | 29–10–2005 | |
| 5 | ಡಾ: ಟಿ.ಎನ್.ರೇವತಿ | ಅದೇ | 1–1–1962 | 5–11–1987 | ಅದೇ | 27–1–2005 | |
| 6 | ಡಾ: ಜಿ.ಎಸ್.ಆಶಾ | ಅದೇ | 28–11–1962 | 18–7–1991 | ಅದೇ | 27–10–2005 | |
| ಆಪ್ತಮಾಲಜಿ ವಿಭಾಗ | | | | | | | |
| 1 | ಡಾ: ಹೆಚ್.ವಿ. ಚಂದ್ರಕುಮಾರ್ | ಕೆ.ಪಿ.ಎಸ್.ಸಿ. | 23–8–1968 | 30–11–2000 | ಅನ್ವಯಿಸು–ವುದಿಲ್ಲ | 30–11–2000 | ಅನಧಿಕೃತ ಗೈರುಹಾಜರಿ |
| 2 | ಡಾ: ಬಿ.ಎ.ಸುಮನ | ವೃಂದ ಬದಲಾವಣೆ | 4–5–1952 | 31–7–1980 | ಅದೇ | 28–10–2005 | |
| 3 | ಡಾ: ಹೇಮಲತಾ ಕೃಷ್ಣಮೂರ್ತಿ | ಅದೇ | 16–9–1958 | 22–8–1984 | ಅದೇ | 7–12–2005 | |
| 4 | ಡಾ: ಕೆಂಗಲ್ ಪ್ರಹ್ಲಾದರೆಡ್ಡಿ | ಅದೇ | 1–6–1956 | 2–3–1985 | ಅದೇ | 7–12–2005 | |
| 5 | ಡಾ: ಜಿ.ಎಸ್ .ಗೋಪಿನಾಥ್ | ಅದೇ | 30–6–1961 | 26–11–1987 | ಅದೇ | 29–10–2005 | |
| 6 | ಡಾ: ಡಿ.ಎನ್.ಪ್ರಕಾಶ್ | ಅದೇ | 7–3–1963 | 1–9–1988 | ಅದೇ | 29–10–2005 | |
| 7 | ಡಾ: ಸಿ.ಎನ್. ಮಧುಸೂದನ್ | ಅದೇ | 20–4–1967 | 18–7–1991 | ಅದೇ | 29–10–2005 | |
| 8 | ಡಾ: ದಮಯಂತಿ ಎಂ.ಸೂರಣಗಿ | ಅದೇ | 13–1–1962 | 26–11–1991 | ಅದೇ | 8–12–2005 | |
| 9 | ಡಾ: ಎನ್. ಮಂಜುಳಾದೇವಿ | ಅದೇ | 5–3–1966 | 21–8–1999 | ಅದೇ | 29–10–2005 | |
| ಪೀಡಿಯಾಟ್ರಿಕ್ಸ್ ವಿಭಾಗ | | | | | | | |
| 1 | ಡಾ: ಆರ್.ಪ್ರೇಮಲತ | ವೃಂದ ಬದಲಾವಣೆ | 1–5–1957 | 1–6–1985 | ಅನ್ವಯಿಸು–ವುದಿಲ್ಲ | 2–11–1999 | 20–4–01 ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) |
| 2 | ಡಾ: ಬಿ. ವಿಜಯಕುಮಾರ್ | ಅದೇ | 2–2–1953 | 28–2–1985 | ಅದೇ | 12–11–1999 | 18–10–05 ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) |
| 3 | ಡಾ: ಸುಧಾ ರುದ್ರಪ್ಪ | ಅದೇ | 5–3–1962 | 20–12–1985 | ಅದೇ | 3–11–1999 | 18–10–05 ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) |
| 4 | ಡಾ: ಜಿ.ಎಂ.ಕುಮಾರ್ | ಅದೇ | 18–5–1961 | 7–8–1991 | ಅದೇ | 16–11–1999 | |
| 5 | ಡಾ: ಸರಳ ಸಭಾಪತಿ | ಅದೇ | 23–9–1959 | 17–2–1986 | ಅದೇ | 19–5–2000 | |
| 6 | ಡಾ: ಕೆ.ಮಲ್ಲೇಶ್ | ಕೆ.ಪಿ.ಎಸ್.ಸಿ. | 28–3–1973 | 11–6–2001 | ಅದೇ | 11–6–2001 | |
| 7 | ಡಾ: ಐ.ವಿ.ತೇಜಸ್ವಿನಿ | ಅದೇ | 3–3–1969 | 21–8–2000 | ಅದೇ | 21–8–2000 | |
| 8 | ಡಾ: ಎಂ.ಲಕ್ಷ್ಮಿ | ಅದೇ | 25–3–1974 | 19–8–2000 | ಅದೇ | 19–8–2000 | |
| 9 | ಡಾ: ಸಹನಾ ದೇವದಾಸ್ | ಅದೇ | 20–3–1966 | 21–8–2000 | ಅದೇ | 21–8–2000 | |
| 10 | ಡಾ: ಬಿ.ಹೆಚ್.ನಟೇಶ್ | ಅದೇ | 5–5–1971 | 18–8–2000 | ಅದೇ | 18–8–2000 | |
| 11 | ಡಾ: ಎಂ.ಆರ್.ಸವಿತ | ವಿಷಯ ಬದಲಾವಣೆ | 18–5–1971 | 29–6–2000 | ಅದೇ | 1–5–2001 | |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 12 | ಡಾ: ತಮಿಳ್ ಸೆಲ್ವನ್ | ಅದೇ | 23–10–1959 | 5–9–2000 | ಅದೇ | 7–2–2001 | |
| 13 | ಡಾ: ಸಿ.ಬಿ.ಉಷಾಕಿರಣ್ | ವೃಂದ ಬದಲಾವಣೆ | 11–11–1959 | 23–2–1985 | ಅದೇ | 3–11–2005 | |
| 14 | ಡಾ: ಉದಯಕುಮಾರ್ | ಅದೇ | 9–4–1960 | 20–9–1985 | ಅದೇ | 28–10–2005 | |
| 15 | ಡಾ: ಕೆ.ಧನಲಕ್ಷ್ಮಿ | ಅದೇ | 30–11–1962 | 5–11–1987 | ಅದೇ | 28–10–2005 | |
| | ಅನಸ್ತೇಶಿಯಾಲಜಿ ವಿಭಾಗ | | | | | | |
| 1 | ಡಾ: ವಿ.ವೈ.ಶ್ರೀನಿವಾಸ್ | ಕೆ.ಪಿ.ಎಸ್.ಸಿ. | 11–6–1972 | 24–11–2000 | ಅನ್ವಯಿಸು–ವುದಿಲ್ಲ | 24–11–2000 | |
| 2 | ಡಾ: ಟಿ.ಸಿ.ಶಿವಕುಮಾರ್ | ಅದೇ | 20–5–1967 | 21–12–2000 | ಅದೇ | 21–12–2000 | |
| 3 | ಡಾ: ಎ.ಎಸ್.ದಿನೇಶ್ | ಅದೇ | 15–12–1969 | 24–10–2000 | ಅದೇ | 24–10–2000 | |
| 4 | ಡಾ: ಟಿ.ಕೆ.ಶಶಿಕಲಾ | ಅದೇ | 20–7–1971 | 30–11–2000 | ಅದೇ | 30–11–2000 | |
| 5 | ಡಾ: ಹೆಚ್.ಜಿ. ಮಂಜುನಾಥ್ | ಅದೇ | 2–7–1967 | 29–11–2000 | ಅದೇ | 29–11–2000 | |
| 6 | ಡಾ: ಕಲೀಮುಲ್ಲಾ ಷರೀಫ್ | ಅದೇ | 9–3–1970 | 24–11–2000 | ಅದೇ | 24–11–2000 | |
| 7 | ಡಾ: ಅರುಣಾ ತೆಗ್ಗಿನಮಠ್ | ವೃಂದ ಬದಲಾವಣೆ | 27–2–1956 | 15–9–1980 | ಅದೇ | 29–10–2005 | |
| 8 | ಡಾ: ಪಿ.ಪ್ರಭಾ | ಅದೇ | 22–2–1959 | 27–2–1985 | ಅದೇ | 27–10–2005 | |
| 9 | ಡಾ: ಆರ್.ಶ್ರೇಯೋವತಿ | ಅದೇ | 5–9–1959 | 27–2–1985 | ಅದೇ | 27–10–2005 | |
| 10 | ಡಾ: ದೇವಿಕಾರಾಣಿ | ಅದೇ | 21–8–1961 | 1–3–1985 | ಅದೇ | 27–1–2005 | |
| 11 | ಡಾ: ಬಿ.ಪಿ.ಮಲ್ಲಣ್ಣ | ಅದೇ | 21–5–1956 | 1–8–1986 | ಅದೇ | 7–12–2005 | |
| 12 | ಡಾ: ಬಾಲಭಾಸ್ಕರ್ | ಅದೇ | 3–8–1965 | 26–9–1991 | ಅದೇ | 7–12–2005 | |
| 13 | ಡಾ: ಜಿ.ದಿನೇಶ್ | ಅದೇ | 1–4–1967 | 1–10–1991 | ಅದೇ | 29–10–2005 | |
| 14 | ಡಾ: ಶ್ರೀನಿವಾಸ್ ಕುಲಕರ್ಣಿ | ಅದೇ | 1–6–1961 | 9–6–1997 | ಅದೇ | 5–12–2005 | |
| | ರೇಡಿಯೋ ಡಯಾಗ್ನಾಸಿಸ್ ವಿಭಾಗ | | | | | | |
| 1 | ಡಾ: ಸಿ.ಪಿ.ನಂಜರಾಜ್ | ವೃಂದ ಬದಲಾವಣೆ | 4–6–1962 | 1–8–1986 | ಅನ್ವಯಿಸು–ವುದಿಲ್ಲ | 2–11–1999 | 27–9–05 ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) |
| 2 | ಡಾ: ಹೆಚ್.ಸಿ.ರಾಮಣ್ಣ | ಅದೇ | 18–2–1954 | 25–2–1985 | ಅದೇ | 28–10–2005 | |
| 3 | ಡಾ: ಎಂ.ಆರ್. ಶಶಿಕುಮಾರ್ | ಅದೇ | 4–5–1958 | 1–8–1986 | ಅದೇ | 3–11–2005 | |
| 4 | ಡಾ: ಎನ್.ಎಲ್. ರಾಜೇಂದ್ರಕುಮಾರ್ | ಅದೇ | 12–1–1961 | 8–8–1986 | ಅದೇ | 3–11–2005 | |
| | ರೇಡಿಯೋಥೆರಪಿ ವಿಭಾಗ | | | | | | |
| | ---- ಈ ವಿಭಾಗದಲ್ಲಿ ಉಪನ್ಯಾಸಕರು ಯಾರೂ ಇರುವುದಿಲ್ಲ ----- | | | | | | |
| | ಟಿ.ಬಿ. ಅಂಡ್ ಸಿ.ಡಿ. ವಿಭಾಗ | | | | | | |
| 1 | ಡಾ: ಬಿ.ಎಲ್. ಶಶಿಭೂಷಣ್ | ಕೆ.ಪಿ.ಎಸ್.ಸಿ. | 5–9–1969 | 25–8–2000 | ಅನ್ವಯಿಸು–ವುದಿಲ | 25–8–2000 | |
| 2 | ಡಾ: ಸಿ.ಉಮೇಶ್ | ಅದೇ | 29–12–1971 | 25–8–2000 | ಅದೇ | 25–8–2000 | |
| 3 | ಡಾ: ಜಿ.ರಾಮಪ್ರಸಾದ್ | ವೃಂದ ಬದಲಾವಣೆ | 9–9–1949 | 28–10–1974 | ಅದೇ | 7–12–2005 | |
| 4 | ಡಾ: ಕರಣಪ್ಪ ಬಂಗಾರಿ | ವೃಂದ ಬದಲಾವಣೆ | 3–3–1951 | 23–1–1984 | ಅದೇ | 29–10–2005 | |
| 5 | ಡಾ: ಹೆಚ್.ಎಂ. ವಿರೂಪಾಕ್ಷ | ಅದೇ | 1–7–1961 | 12–11–1987 | ಅದೇ | 29–10–2005 | |
| | ಕಾರ್ಡಿಯೋ ಥೊರಾಸಿಕ್ ಸರ್ಜರಿ ವಿಭಾಗ | | | | | | |
| 1 | ಡಾ: ಅರುಣಕುಮಾರ್ ಹರಿದಾಸ್ | ಕೆ.ಪಿ.ಎಸ್.ಸಿ. | 15–8–1971 | 5–6–2000 | ಅನ್ವಯಿಸು–ವುದಿಲ್ಲ | 23–9–2000 | |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| ಪ್ಲಾಸ್ಟಿಕ್ ಸರ್ಜರಿ ವಿಭಾಗ | | | | | | | |
| 1 | ಡಾ: ಮೋಹನ್ | ಕೆ.ಪಿ.ಎಸ್.ಸಿ | 7–8–1971 | 5–6–2000 | ಅನ್ವಯಿಸು–ವುದಿಲ್ಲ | 5–6–2000 | |
| 2 | ಡಾ: ಸ್ಮಿತಾ ಎಸ್.ಸೆಗು | ಅದೇ | 28–9–1967 | 4–8–2000 | ಅದೇ | 4–8–2000 | |
| 3 | ಡಾ: ಡಿ.ಎನ್.ಓಂಕಾರ್ ನಾಯಕ್ | ಅದೇ | 15–5–1965 | 3–8–2000 | ಅದೇ | 3–8–2000 | ಅನಧಿಕೃತ ಗೈರುಹಾಜರಿ |
| ಕಾರ್ಡಿಯಾಲಜಿ ವಿಭಾಗ | | | | | | | |
| 1 | ಡಾ: ಕೆ.ಎಸ್.ಸದಾನಂದ | ಕೆ.ಪಿ.ಎಸ್.ಸಿ | 19–4–1969 | 26–8–2000 | ಅನ್ವಯಿಸು–ವುದಿಲ್ಲ | 26–8–2000 | |
| ಯುರಾಲಜಿ ವಿಭಾಗ | | | | | | | |
| 1 | ಡಾ: ಎಂ.ಶಿವಲಿಂಗಯ್ಯ | ವೃಂದ ಬದಲಾವಣೆ | 24–3–1963 | 7–11–1987 | ಅನ್ವಯಿಸು–ವುದಿಲ್ಲ | | |
| ನ್ಯೂರಾಲಜಿ ವಿಭಾಗ | | | | | | | |
| 1 | ಡಾ: ಕೆ.ಸುರೇಶ್ | ಕೆ.ಪಿ.ಎಸ್.ಸಿ. | 1–1–1972 | 4–8–2000 | ಅನ್ವಯಿಸು–ವುದಿಲ್ಲ | 4–8–2000 | |
| 2 | ಡಾ: ಎಂ.ದಿವ್ಯ ಪ್ರಕಾಶ್ | ಅದೇ | 20–12–1971 | 3–8–2000 | ಅದೇ | 3–8–2000 | |
| ನ್ಯೂರೋ ಸರ್ಜರಿ ವಿಭಾಗ | | | | | | | |
| ------- ಈ ವಿಭಾಗದಲ್ಲಿ ಉಪನ್ಯಾಸಕರು ಯಾರೂ ಇರುವುದಿಲ್ಲ ------- | | | | | | | |
| ದಿನಾಂಕ 1–1–2006ರಲ್ಲಿದ್ದಂತೆ ವೈದ್ಯಕೀಯ ಶಿಕ್ಷಣ ಇಲಾಖೆಯ ದಂತಶಾಸ್ತ್ರ ವಿಭಾಗದ ಉಪನ್ಯಾಸಕರ ತಾತ್ಕಾಲಿಕ ಜೇಷ್ಠತಾ ಪಟ್ಟಿ | | | | | | | |
| ದಂತಶಾಸ್ತ್ರ ವಿಭಾಗ | | | | | | | |
| ಕ್ರ. ಸಂ. | ಹೆಸರು | ನೇರ ನೇಮಕಾತಿ/ ಮುಂಬಡ್ತಿ/ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
| ಆರ್ಥೋಡಾಂಷಿಯಾ ವಿಭಾಗ | | | | | | | |
| 1 | ಡಾ: ಎಂ.ಎನ್.ಪದ್ಮಿನಿ | ವೃಂದ ಬದಲಾವಣೆ | 20–4–1960 | 2–7–1984 | ಅನ್ವಯಿಸು–ವುದಿಲ್ಲ | 7–2–2000 | 19–4–01 ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) |
| 2 | ಡಾ: ಹೆಚ್.ಎಲ್. ಉಮಾ | ಅದೇ | – | – | ಅದೇ | 7–2–2000 | |
| 3 | ಡಾ: ಹೆಚ್.ಸಿ. ರಾಮಕೃಷ್ಣ | ಅದೇ | 22–7–1957 | 20–6–1984 | ಅದೇ | 28–10–2005 | |
| ಪೆರಿಯೋಡಾಂಷಿಯಾ ವಿಭಾಗ | | | | | | | |
| 1 | ಡಾ: ಎ.ಮಲ್ಲಿಕಾ | ವೃಂದ ಬದಲಾವಣೆ | 12–4–1960 | 30–10–1986 | ಅನ್ವಯಿಸು–ವುದಿಲ್ಲ | 28–10–2005 | |
| ಪ್ರಾಸ್ಥೋಡಾಂಟಿಕ್ಸ್ ವಿಭಾಗ | | | | | | | |
| 1 | ಡಾ: ಪ್ರೇಮ | ವೃಂದ ಬದಲಾವಣೆ | 13–10–1964 | 12–4–1993 | ಅನ್ವಯಿಸು–ವುದಿಲ್ಲ | 28–10–2005 | |
| 2 | ಡಾ: ಎಸ್.ಕೆ.ವಿಶ್ವನಾಥ್ | ಅದೇ | 16–10–1975 | 23–8–2002 | ಅದೇ | 28–10–2005 | |
| ಕಮ್ಯೂನಿಟಿ ಡೆಂಟಿಸ್ಟ್ರಿ ವಿಭಾಗ | | | | | | | |
| 1 | ಡಾ: ಆರ್.ಯಶೋಧ | ವೃಂದ ಬದಲಾವಣೆ | 25–3–1972 | 8–9–2000 | ಅನ್ವಯಿಸು–ವುದಿಲ್ಲ | 28–10–2005 | |
| ಪೀಡೋಡಾಂಷಿಯಾ ವಿಭಾಗ | | | | | | | |
| ------- ಈ ವಿಭಾಗದಲ್ಲಿ ಉಪನ್ಯಾಸಕರು ಯಾರೂ ಇರುವುದಿಲ್ಲ ------- | | | | | | | |
| ಓರಲ್ ಸರ್ಜರಿ ವಿಭಾಗ | | | | | | | |
| ------- ಈ ವಿಭಾಗದಲ್ಲಿ ಉಪನ್ಯಾಸಕರು ಯಾರೂ ಇರುವುದಿಲ್ಲ ------- | | | | | | | |
| ಓರಲ್ ಮೆಡಿಸಿನ್ ವಿಭಾಗ | | | | | | | |
| ------- ಈ ವಿಭಾಗದಲ್ಲಿ ಉಪನ್ಯಾಸಕರು ಯಾರೂ ಇರುವುದಿಲ್ಲ ------- | | | | | | | |
| ಓರಲ್ ಪೆಥಾಲಜಿ ವಿಭಾಗ | | | | | | | |
| ------- ಈ ವಿಭಾಗದಲ್ಲಿ ಉಪನ್ಯಾಸಕರು ಯಾರೂ ಇರುವುದಿಲ್ಲ ------- | | | | | | | |
| ಆಪರೇಟಿವ್ ಡೆಂಟಿಸ್ಟ್ರಿ ವಿಭಾಗ | | | | | | | |
| ------- ಈ ವಿಭಾಗದಲ್ಲಿ ಉಪನ್ಯಾಸಕರು ಯಾರೂ ಇರುವುದಿಲ್ಲ ------- | | | | | | | |

ಡಿ.ಬಿ. ಗಣಾಚಾರಿ

ಪಿ.ಆರ್. 870

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)
## ಸಣ್ಣ ನೀರಾವರಿ ವಿಭಾಗ, ಬೀದರ
## ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (ಭಾರತ ಸರ್ಕಾರ)

**ಕೈಪಿಡಿ–1 :–** ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು.

ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು.

ಸಣ್ಣ ನೀರಾವರಿ ವಿಭಾಗ, ಬೀದರ, ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಗುಲಬರ್ಗಾ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತದೆ. ಈ ವಿಭಾಗದಡಿಯಲ್ಲಿ ದಿನಾಂಕ:01–04–2005ರ ಪ್ರಕಾರ ಒಟ್ಟು 103 ಸಣ್ಣ ನೀರಾವರಿ ಯೋಜನೆಗಳು ಅಸ್ತಿತ್ವದಲ್ಲಿವೆ ಇವುಗಳಿಂದ ಒಟ್ಟು 22,779=00 ಹೆಕ್ಟೇರ ಭೂಮಿಗೆ ನೀರಾವರಿಯಾಗುವ ಅಚ್ಚುಕಟ್ಟು ಪ್ರದೇಶ ಹೊಂದಿದೆ.

ಈ ವಿಭಾಗದ ಕಾರ್ಯವ್ಯಾಪ್ತಿಯು ಬೀದರ ಜಿಲ್ಲೆಯ ಎಲ್ಲಾ 05 ತಾಲೂಕಿನಲ್ಲಿನ 40 ಹೆಕ್ಟೇರಿಗಿಂತ ಅಧಿಕ ಹಾಗೂ 2000 ಹೆಕ್ಟೇರಿಗಿಂತ ಕಡಿಮೆ ಅಚ್ಚುಕಟ್ಟು ಬರುವ ಸಣ್ಣ ನೀರಾವರಿ ಕೆರೆ, ಜಿನಗು ಕೆರೆ, ಏತ ನೀರಾವರಿ ಯೋಜನೆ, ಅಣೆಕಟ್ಟು, ಬ್ಯಾರೇಜ ಹಾಗೂ ಬ್ಯಾರೇಜ ಒಳಗೊಂಡ ಸೇತುವೆಗಳ ನಿರ್ಮಾಣ ಮತ್ತು ಅವುಗಳ ನಿರ್ವಹಣೆಗೊಂಡು ಕಾರ್ಯಭಾರ ಹೊಂದಿರುತ್ತದೆ.

ಬೀದರ ಜಿಲ್ಲೆಯು ಕರ್ನಾಟಕದ ಅತ್ಯಂತ ಹಿಂದುಳಿದ ಜಿಲ್ಲೆಗಳಲ್ಲಿ ಒಂದಾಗಿದ್ದು, ಪ್ರಾದೇಶಿಕ ಅಸಮತೋಲನೆಯು ಕೂಡ ಒಂದು ಪ್ರಮುಖ ಕಾರಣವಾಗಿರುತ್ತದೆ. ಈ ಭಾಗದ ಶೇಕಡಾ 90 ರಷ್ಟು ರೈತರು ಪ್ರಮುಖವಾಗಿ ಮಳೆ ಮೇಲೆಯೇ ಅವಲಂಬಿತರಾಗಿದ್ದು,ಇತ್ತೀಚಿನ ವರ್ಷಗಳಲ್ಲಿ ಮಳೆ ಪ್ರಮಾಣ ಅತ್ಯಂತ ಕಡಿಮೆಗೊಂಡು ಪ್ರತಿ ವರ್ಷವು ಬರಗಾಲದ ಸಮಸ್ಯೆ ಎದುರಾಗುತ್ತಿದೆ.

ಈ ವಿಭಾಗವು ಬೀದರ ಜಿಲ್ಲೆಗೆ ಸಂಬಂಧಿಸಿದ್ದು, ಈ ಜಿಲ್ಲೆಯಲ್ಲಿ ಬರುವ ಎಲ್ಲಾ 05 ತಾಲೂಕಿನಲ್ಲಿ ಬರುವ ಸಣ್ಣ ನೀರಾವರಿ ಯೋಜನೆಗಳ ನಿರ್ಮಾಣ, ಉಸ್ತುವಾರಿ ಹಾಗೂ ನಿರ್ವಹಣೆಯನ್ನು ನೋಡಿಕೊಳ್ಳುತ್ತದೆ. ಈ ವಿಭಾಗದ ಅಡಿಯಲ್ಲಿ ಒಟ್ಟು 02 ಉಪ–ವಿಭಾಗಗಳ ಕಛೇರಿಗಳಿದ್ದು ಪ್ರತಿ ಉಪ ವಿಭಾಗದಲ್ಲಿ ಒಬ್ಬರು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಕೆಲಸ ನಿರ್ವಹಿಸುತ್ತಿದ್ದಾರೆ. ಈ 02 ಉಪ ವಿಭಾಗಗಳ ಕಾರ್ಯಕ್ಷೇತ್ರ ಈ ಕೆಳಗಿನಂತಿರುತ್ತದೆ.

| ಕ್ರ. ಸಂ | ಸಣ್ಣ ನೀರಾವರಿ ವಿಭಾಗ ಬೀದರ | ಸಣ್ಣ ನೀರಾವರಿ ಉಪ–ವಿಭಾಗಗಳ ಕಛೇರಿಗಳು. | ಉಪ–ವಿಭಾಗದ ಕಾರ್ಯವ್ಯಾಪ್ತಿಯಲ್ಲಿ ಬರುವ ತಾಲ್ಲೂಕುಗಳು. |
|---|---|---|---|
| 1 | 2 | 3 | 3 |
| 1) | ಸಣ್ಣ ನೀರಾವರಿ ವಿಭಾಗ ಬೀದರ | ಸಣ್ಣ ನೀರಾವರಿ ಉಪ–ವಿಭಾಗ, ಬೀದರ. | ಬೀದರ, ಔರಾದ ಮತ್ತು ಹುಮನಾಬಾದ. |
| 2) | – ಸದರ – | ಸಣ್ಣ ನೀರಾವರಿ ಉಪ–ವಿಭಾಗ, ಬಸವಕಲ್ಯಾಣ. | ಬಸವಕಲ್ಯಾಣ ಮತ್ತು ಭಾಲ್ಕಿ. |

ಕಾರ್ಯಪಾಲಕ ಇಂಜಿನೀಯರ, ಸಣ್ಣ ನೀರಾವರಿ ವಿಭಾಗದ ಮುಖ್ಯಸ್ಥರಾಗಿರುತ್ತಾರೆ. ಇವರ ಕಛೇರಿಯಲ್ಲಿ ಮುಖ್ಯವಾಗಿ ಐದು ಶಾಖೆಗಳು ಕಾರ್ಯನಿರ್ವಹಿಸುತ್ತಿರುತ್ತವೆ.

1) ಆಡಳಿತ ಶಾಖೆ.
2) ಲೆಕ್ಕ ಶಾಖೆ.
3) ಉಗ್ರಾಣ ಶಾಖೆ.
4) ತಾಂತ್ರಿಕ ಶಾಖೆ.
5) ಭೂಸ್ವಾಧೀನ ಶಾಖೆ

**(1) ಆಡಳಿತ ಶಾಖೆ:–** ಕಾರ್ಯಪಾಲಕ ಇಂಜಿನೀಯರ, ಸಣ್ಣ ನೀರಾವರಿ ವಿಭಾಗ, ಬೀದರ ಕಛೇರಿಯಲ್ಲಿ ಮಂಜೂರಾಗಿರುವ 31 ಹುದ್ದೆಗಳ ಪೈಕಿ 27 ಅಧಿಕಾರಿ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿರುತ್ತಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ 'ಎ' 1 ನೌಕರರು, ವರ್ಗ 'ಬಿ' 03 ವರ್ಗ 'ಸಿ' 19 ಮತ್ತು ವರ್ಗ 'ಡಿ' 04 ಸಂಖ್ಯೆಗಳಾಗಿರುತ್ತವೆ.

ಅಧೀಕ್ಷಕರು ಆಡಳಿತ ಶಾಖೆ ಮುಖ್ಯಸ್ಥರಾಗಿದ್ದು, ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು ಭವಿಷ್ಯ ನಿಧಿಗಳ ದಾಖಲೆಗಳನ್ನು ನಿರ್ವಹಿಸುವುದು, ವಿಚಾರಣೆ, ವಿದ್ಯುತ್‌ಚ್ಛಕ್ತಿ ಮತ್ತು ದೂರವಾಣಿ ಬಿಲ್ಲುಗಳನ್ನು ಪಾವತಿಸುವುದು, ದಾಖಲೆಗಳನ್ನು ಸಂಗ್ರಹಿಸಿ ಕಾಪಾಡುವುದು.

ನಿರ್ವಹಿಸುವ ಸಂಕ್ಷಿಪ್ತ ಕೆಲಸದ ವಿವರವನ್ನು ಈ ಕೆಳಗೆ ನೀಡಲಾಗಿದೆ.

1) ಆಡಳಿತ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾವಿವರಗಳು, ವಿದ್ಯುತಚ್ಛಕ್ತಿ ಮತ್ತು ದೂರವಾಣಿ ಸಂಬಂಧಿಸಿದ ಸಾದಿಲ್ವಾರು ಬಿಲ್ಲುಗಳನ್ನು ತಯಾರಿಸಿ ಪಾವತಿಸುವುದು.

2) ನಗದು ಮತ್ತು ಸ್ವೀಕೃತಿ ಮತ್ತು ರವಾನೆ ಶಾಖೆಯು ದಾಖಲೆಗಳನ್ನು ನಿರ್ವಹಿಸುವದು. ಸೇವಾ ಅಂಚೆ ಚೀಟಿಗಳ ದಾಖಲೆ ನಿರ್ವಹಣೆ ದೈನಂದಿನ ಪತ್ರಗಳನ್ನು ರವಾನಿಸುವುದು ಹಾಗೂ ಸ್ವೀಕರಿಸುವುದು ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತದೆ.

3) ನೌಕರರ ಶಿಸ್ತು ಪ್ರಕರಣ ಮತ್ತು ಅವ್ಯವಹಾರದ ಬಗ್ಗೆ ಮುಂದಿನ ಕ್ರಮಕ್ಕಾಗಿ ಅಧೀಕ್ಷಕ ಅಭಿಯಂತರವರಿಗೆ ವರದಿ ಸಲ್ಲಿಸುವದು ಇತ್ಯಾದಿ ಕೆಲಸವನ್ನು ನಿರ್ವಹಿಸುತ್ತದೆ.

**(2) ಲೆಕ್ಕ ಶಾಖೆ:–** ಸಣ್ಣ ನೀರಾವರಿ ವಿಷಯಕ್ಕೆ ಸಂಬಂಧಿಸಿದಂತೆ ಲೆಕ್ಕ ಪತ್ರ ಕಾಮಗಾರಿಗಳ ನಗದು ಪುಸ್ತಕಗಳ ನಿರ್ವಹಣೆ, ಲೆಕ್ಕ ಪತ್ರ ಕ್ರೋಢೀಕರಣ, ಮಹಾಲೇಖಪಾಲರ ಆಡಿಟ ಪ್ಯಾರ, ಎಂ.ಎಂ.ಆರ್./ ಆಯವ್ಯಯ ತಯಾರಿಕೆ ಅನುದಾನ ಮರುಪಾವತಿ, ಕಾಮಗಾರಿಗಳ ಟೆಂಡರ ಪ್ರಕ್ರಿಯೆಗಳ ಪರಿಶೀಲನೆ, ಅಂದಾಜು ಪರಿಶೀಲನೆ, ಬಿಲ್ಲುಗಳ ತನಿಖೆ, ಹಣ ಸಂದಾಯ ಇದೇ ಮುಂತಾದ ಕಾರ್ಯಗಳನ್ನು ನಿರ್ವಹಿಸುತ್ತಾರೆ.

**(3) ಉಗ್ರಾಣ ಶಾಖೆ:–** ಉಗ್ರಾಣ ಶಾಖೆಯ ಕಾರ್ಯಭಾರವನ್ನು ದ್ವಿತೀಯ ದರ್ಜೆ ಉಗ್ರಾಣ ಸಹಾಯಕರು ನೋಡಿಕೊಳ್ಳುತ್ತಿದ್ದಾರೆ. ಈಗ ಸರ್ಕಾರದವತಿಯಿಂದ ಕಾಮಗಾರಿಗಾಗಿ ಯಾವುದೇ ಸಾಮಗ್ರಿಗಳನ್ನು ಖರೀದಿಸುತ್ತಿಲ್ಲವಾದ್ದರಿಂದ ಈ ಶಾಖೆಗೆ ಹೆಚ್ಚು ಮಹತ್ವ ಇರುವುದಿಲ್ಲ. ಆದಾಗ್ಯೂ ತುರ್ತುಪರಿಸ್ಥಿತಿಯಲ್ಲಿ ಏನಾದರೂ ಸಾಮಗ್ರಿಗಳನ್ನು ಸಲ್ಲಿಸ ಬೇಕಾದಲ್ಲಿ ಪಾರದರ್ಶಕದ ನಿಯಮದಂತೆ ಸಾಮಗ್ರಿಗಳನ್ನು ಖರೀದಿಸಲು ಈ ಶಾಖೆಯಿಂದ ಕ್ರಮ ಕೈಗೊಳ್ಳಲಾಗುತ್ತದೆ. ಅಲ್ಲದೇ ಹಾಲಿ ಇರುವ ಸಾಮಗ್ರಿಗಳ ವಹಿ ಇತ್ಯಾದಿಗಳನ್ನು ಈ ಶಾಖೆಯಲ್ಲಿ ನಿರ್ವಹಿಸಲಾಗುತ್ತದೆ. ಅಲ್ಲದೇ ಯಂತ್ರೋಪಕರಣಗಳ ನಿರ್ವಹಣೆ ಮತ್ತು ನಿಯತಕಾಲಿಕ ವರದಿಗಳನ್ನು ಸಲ್ಲಿಸುವ ಜವಾಬ್ದಾರಿಯು ಈ ಶಾಖೆಗೆ ಸಂಬಂಧಿಸಿರುತ್ತದೆ.

**(4) ತಾಂತ್ರಿಕ ಶಾಖೆ:–** ಕಾರ್ಯಪಾಲಕ ಅಭಿಯಂತರರು ಇವರು ಈ ವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯ ಭಾರವನ್ನು ಹೊಂದಿದ್ದು ಇವರಿಗೆ ಸಹಾಯಕ್ಕಾಗಿ ಸಹಾಯಕ ಕಾರ್ಯಪಾಲಕ ಇಂಜನೀಯರ ಶ್ರೇಣಿಯ ಒಬ್ಬರು ತಾಂತ್ರಿಕ ಸಹಾಯಕರಿರುತ್ತಾರೆ. ಈ ತಾಂತ್ರಿಕ ಸಹಾಯಕರ ಕಾರ್ಯ ವ್ಯಾಪ್ತಿ ಈ ಕೆಳಗಿನಂತಿರುತ್ತದೆ.

1) ಉದ್ದೇಶಿಸಿರುವ ಸಣ್ಣ ನೀರಾವರಿ ಕಾಮಗಾರಿಗಳನ್ನು ತಾಂತ್ರಿಕವಾಗಿ ಪರಿಶೀಲಿಸುವದು.

2) ಅಂದಾಜು ಪಟ್ಟಿ ಹಾಗೂ ವಿನ್ಯಾಸಗಳನ್ನು ಮತ್ತು ಕರಡು ಟೆಂಡರ ಪತ್ರಿಕೆಗಳನ್ನು ಅಂತಿಮ ಗೊಳಿಸುವುದು.

3) ರೂ.4.00 ಲಕ್ಷದ ವರೆಗಿನ ಆಡಳಿತಾತ್ಮಕ ಅನುಮೋದನೆ ಹೊಂದಿರುವ ಅಂದಾಜು ಪಟ್ಟಿಗಳಿಗೆ ತಾಂತ್ರಿಕ ಮಂಜೂರಾತಿ ನೀಡುವುದು.

4) ರೂ. 4.00 ಲಕ್ಷದ ಮೇಲ್ಪಟ್ಟು ಅಂದಾಜು ಪಟ್ಟಿ, ಮಾಸ್ ಹಾಗೂ ಕರಡು ಟೆಂಡರ ಪತ್ರಿಕೆಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸುವುದು ಹಾಗೂ ಅನುಮೋದನೆ ಪಡೆಯುವದು.

5) ಯೋಜನೆಗಳ ಪ್ರಗತಿಯ ಕುರಿತು ಪರಿಶೀಲಿಸುವುದು ಹಾಗೂ ವರದಿ ಪಡೆಯುವದು (ಇವುಗಳಲ್ಲಿ ಅಯವ್ಯಯ ಅನುಬಂಧ ಇ ನಬಾರ್ಡ ರೈತಕಾರ್ಯ ಕೆರೆ, 11ನೇ ಹಣಕಾಸು ಆಯೋಗ, ಆರ್.ಎಸ್.ವಿ.ವೈ., ಹೆಚ್. ಕೆ.ಡಿ.ಬಿ. ರಾಷ್ಟ್ರೀಯ ಯೋಜನೆಯಾಗಿರುವ ಕೆರೆಗಳ ಅಭಿವೃದ್ಧಿ ಪಡಿಸುವ ಕಾಮಗಾರಿಗಳು ಒಳಗೊಂಡಿವೆ)

6) ಎಂ.ಎಂ.ಆರ್. ಮತ್ತು ಕೆ.ಡಿ.ಪಿ. ಸಭೆಗಳಿಗೆ ಪ್ರಗತಿಯ ವರದಿ ತಯಾರಿಸುವುದು ಹಾಗೂ ಹಾಜರಾಗುವುದು.

7) ವಾರ್ಷಿಕ ಮತ್ತು ಪಂಚವಾರ್ಷಿಕ ಯೋಜನೆಗಳನ್ನು ತಯಾರಿಸುವುದು.

8) ವಿಧಾನ ಸಭಾ ಮತ್ತು ವಿಧಾನ ಪರಿಷತ್ ಪ್ರಶ್ನೆಗಳಿಗೆ ಉತ್ತರಿಸುವದು.

9) ಅಂದಾಜು ಸಮಿತಿ ಸಭೆ ಮತ್ತು ಭರವಸೆ ಸಮಿತಿ ಸಭೆಗಳಿಗೆ ವರದಿ ತಯಾರಿಸುವದು ಹಾಗೂ ಸಮಿತಿಗೆ ಹಾಜರಾಗುವುದು.

**ಕೈಪಿಡಿ–2 ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ.**

ಕಾರ್ಯನಿರ್ವಾಹಕ ಅಭಿಯಂತರರ, ಕಾರ್ಯಭಾರ ಈ ಕೆಳಗಿನಂತಿದೆ.

1) ಕಾಮಗಾರಿಗಳ ಅಂದಾಜು ಮೊತ್ತ ರೂ. 2.00 ಲಕ್ಷದ ವರೆಗಿನ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿ,ತಾಂತ್ರಿಕ ಮಂಜೂರಾತಿ ನೀಡುವ ಅಧಿಕಾರ ಇರುತ್ತದೆ.

2) ಅಂದಾಜು ಮೊತ್ತ ರೂ.2.00 ಲಕ್ಷದ ವರೆಗಿನ ಕಾಮಗಾರಿಯ ಕರಡು ಗುತ್ತಿಗೆ ಅನುಮೋದನೆ ನೀಡುವ ಅಧಿಕಾರ ಇರುತ್ತದೆ.

3) ಕಾಮಗಾರಿಗಳ ಟೆಂಡರ್‌ಗಳನ್ನು ಕರೆಯುವುದು.

4) ಎಂ.ಎಂ.ಆರ್. ಸಭೆ ನಡೆಸಿ ಕಾಮಗಾರಿಗಳ ಆರ್ಥಿಕ ಮತ್ತು ಭೌತಿಕ ಪ್ರಗತಿ ಪರಿಶೀಲನೆ ಮಾಡುವುದು.

5) ವಿಧಾನ ಸಭೆ ಮತ್ತು ವಿಧಾನ ಪರಿಷತ್ ನಡುವಳಿಯಲ್ಲಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.

6) ಅಧೀನ ಕಛೇರಿಗಳ ಆಡಳಿತಾತ್ಮಕ ಪರಿವಿಕ್ಷಣೆ ನಡೆಸುವುದು.

7) ಮಹಾಲೇಖಾ ಪಾಲಕರ ತಪಾಸಣೆ ವರದಿಗಳಿಗೆ ಉತ್ತರ ನೀಡುವುದು

8) ಸರ್ಕಾರದ ನಿಗದಿತ ಸಭೆಗಳಿಗೆ ಹಾಜರಾಗುವುದು ಹಾಗೂ ಚರ್ಚಿಸಿದ ಅಂಶಗಳ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳುವುದು.

9) ದೈನಂದಿನ ಆಡಳಿತವನ್ನು ನಡೆಸುವದು.

10) ಪ್ರಗತಿಯಲ್ಲಿರುವ ಕಾಮಗಾರಿಗಳ ಪ್ರಗತಿಯನ್ನು ಹಾಗೂ ಗುಣಮಟ್ಟವನ್ನು ತಪಾಸಣೆ ಮಾಡುವುದು.

11) ವಿಭಾಗ ಕಛೇರಿಯಲ್ಲಿರುವ ಮಾಹಿತಿಯನ್ನು ಮಾಹಿತಿ ಪಡೆಯುವ ಹಕ್ಕಿನ ನಿಯಮ ಪ್ರಕಾರ ಕೋರಿಕೆ ಬಂದಲ್ಲಿ ಸಾರ್ವಜನಿಕರಿಗೆ ನೀಡುವುದು.

12) ಕಛೇರಿಯ ಉಳಿದ ಅಧಿಕಾರಿಗಳ ಮತ್ತು ಸಿಬ್ಬಂದಿಗಳಿಗೆ ಪ್ರತ್ಯೇಕವಾಗಿ ಸ್ವತಂತ್ರ ಅಧಿಕಾರವನ್ನು ನೀಡಿರುವುದಿಲ್ಲ. ಕಾರಣ ಅಧಿಕಾರಿಗಳು ಮತ್ತು ಸಿಬ್ಬಂದಿಗಳು ಕಾರ್ಯನಿರ್ವಾಹಕ ಅಭಿಯಂತರರಿಗೆ ಕರ್ತವ್ಯ ನಿಭಾಯಿಸಲು ಸಹಾಯ ಮಾಡುವುದು ಹಾಗೂ ಸಹಕರಿಸುವುದು.

**ಕೈಪಿಡಿ–3 :–** ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳ ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು.

ಇಲಾಖೆಯ ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ

1) ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2
2) ಕರ್ನಾಟಕ ಪಾರದರ್ಶಕ ನಿಯಮ 2000
3) ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2 ನ್ನು ಅನುಸರಿಸಲಾಗುವದು.
4) ಭೂಸ್ವಾಧೀನ ಕಾಯ್ದೆ.
5) ಉಗ್ರಾಣ ಕೈಪಿಡಿ
6) ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತಿದೆ.

ನೀರಾವರಿ ಕಾಮಗಾರಿಗಳ ನಿರ್ವಹಣೆಯಲ್ಲಿ

1) ಕರ್ನಾಟಕ ನೀರಾವರಿ ಕಾಯ್ದೆ,
2) ಕರ್ನಾಟಕ ನೀರಾವರಿ (ನೀರಿನ ಕರ ವಿಧಿಸುವದು) ನಿಯಮ 1965
3) ನೀರಾವರಿ ಕೈಪಿಡಿ 1974.

ಇವುಗಳನ್ನು ಅನುಸರಿಸಲಾಗುತ್ತಿದೆ.

ಈ ಇಲಾಖೆಯಲ್ಲಿ ನಿರ್ವಹಿಸಲ್ಪಡುವ ಬಿಲ್ಲು ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕ ನಿಯಮದ ಅನುಸಾರ ಟೆಂಡರ ಕರೆದು ಗುತ್ತಿಗೆದಾರರಿಗೆ ನೀಡಲಾಗುತ್ತಿದೆ. ಗುತ್ತಿಗೆದಾರರನ್ನು ನಿಗಧಿಪಡಿಸಿದ ನಂತರ ಅವರಿಗೆ ಕಾರ್ಯಾದೇಶ ನೀಡಲಾಗುತ್ತಿದೆ. ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಗುತ್ತಿಗೆದಾರರಿಗೆ ನಿವೇಶನವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಿಸಲು ಮಾರ್ಕಔಟ ನೀಡಿ ಕೆಲಸ ಚಾಲನೆ ಮಾಡುತ್ತಾರೆ. ಸಂಬಂಧಿಸಿದ ಸಹಾಯಕ/ ಕಿರಿಯ ಅಭಿಯಂತರರು, ದೈನಂದಿನ ನಿವೇಶನಕ್ಕೆ ಹೋಗಿ ಕೆಲಸದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಆಗಿಂದಾಗ್ಗೆ ನಿವೇಶನಕ್ಕೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ ಕಾರ್ಯನಿರ್ವಾಹಕ ಅಭಿಯಂತರು ನಿವೇಶನಕ್ಕೆ ಭೇಟಿ ನೀಡಿ ಸಲಹೆ ಸೂಚನೆ ನೀಡುತ್ತಾರೆ. ಪ್ರಗತಿಯನ್ನು ಪರಿಶೀಲಿಸಲು ಅಧೀಕ್ಷಕ ಅಭಿಯಂತರರು ಮತ್ತು ಮುಖ್ಯ ಅಭಿಯಂತರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತಿದೆ.

ಅಕೌಂಟಬಿಲಿಟಿ ಬಗ್ಗೆ ಮಹಾಲೇಖಪಾಲರು ವರ್ಷಕ್ಕೊಮ್ಮೆ ಈಗ ಎರಡು ವರ್ಷಕ್ಕೊಮ್ಮೆ ವಿಭಾಗ ಕಛೇರಿಯ ಪರಿವೀಕ್ಷಣೆ ಮಾಡುತ್ತಾರೆ. ಅಲ್ಲದೇ ಮುಖ್ಯ ಅಭಿಯಂತರರ ಕಛೇರಿ ಹಾಗೂ ಅಧೀಕ್ಷಕ ಅಭಿಯಂತರರ ಕಛೇರಿಯಿಂದಲೂ ವಿಭಾಗದ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಯ ಬಗ್ಗೆ ಏನಾದರೂ ಅರ್ಜಿ ಬಂದಲ್ಲಿ ಮಾನ್ಯ ಲೋಕಾಯುಕ್ತರೂ ಕೂಡ ನಿವೇಶನವನ್ನು ಪರಿವೀಕ್ಷಣೆ ಮಾಡಿ ಏನಾದರೂ ಕಳಪೆ ಕಾಮಗಾರಿ ಇದ್ದಲ್ಲಿ ಸೂಕ್ತಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

**ಕೈಪಿಡಿ–4:–** ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು.

ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳ ಆರ್ಥಿಕ ಪ್ರಾಧಿಕಾರ ಪ್ರತ್ಯಾಯೋಜನೆ, ಸರ್ಕಾರಿ ಆದೇಶ ಸಂ: ಪಿಡಬ್ಲ್ಯೂ–1 ಎಫ್‌ಸಿಆರ್–93 ಬೆಂಗಳೂರು ದಿನಾಂಕ 15–12–1994.

ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ಸರಕಾರಿ ಆದೇಶ ಸಂ. ಎಫ್‌ಡಿ–1 ಟಿಎಫ್‌ಸಿ 2001 ಬೆಂಗಳೂರು ದಿನಾಂಕ 02–02–2001.

ಲೋಕೋಪಯೋಗಿ ಇಲಾಖೆ ಸಂಹಿತೆ

ಲೋಕೋಪಯೋಗಿ ಆರ್ಥಿಕ ಸಂಹಿತೆ.

**ಕೈಪಿಡಿ–5:–** ಇಲಾಖೆಯ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು, ಸೂಚನೆಗಳು, ದಾಖಲೆಗಳು, ಕೈಪಿಡಿಗಳ ವಿವರ,

ಕಛೇರಿ ಕೈಪಿಡಿ, ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು.

- ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು.
- ಕರ್ನಾಟಕ ಸರ್ಕಾರಿ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು.
- ಕರ್ನಾಟಕ ಆರ್ಥಿಕ ಸಂಹಿತೆ.
- ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2
- ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ – 2000.
- ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2 ನ್ನು ಅನುಸರಿಸಲಾಗುವುದು.
- ಭೂಸ್ವಾಧೀನ ಕಾಯ್ದೆ.
- ಉಗ್ರಾಣ ಕೈಪಿಡಿ.

- ಮಧ್ಯಸ್ಥಿಕೆ ಕಾಯ್ದೆ. 1996 ಮತ್ತು 1940.
- ಕರ್ನಾಟಕ ನೀರಾವರಿ ಕಾಯ್ದೆ 1965.
- ಕರ್ನಾಟಕ ನೀರಾವರಿ (ನೀರಿನ ಕರ ವಿಧಿಸುವುದು) ನಿಯಮ 1965.
- ನೀರಾವರಿ ಕೈಪಿಡಿ 1974.
- ಐ.ಎಸ್. ಕೋಡ್ಸ್.
- ಏತ ನೀರಾವರಿ ಯೋಜನೆಗಳ ಅಂದಾಜನ್ನು ತಯಾರಿಸಲು ಮಾರ್ಗದರ್ಶನ ಕೈಪಿಡಿ.
- ಸಣ್ಣ ನೀರಾವರಿ ಕೆರೆಗಳ ಅಂದಾಜನ್ನು ತಯಾರಿಸಲು ಮಾರ್ಗದರ್ಶನ ಕೈಪಿಡಿ.
- ಸಾದಿಲ್ವಾರು ವೆಚ್ಚದ ಕೈಪಿಡಿ.
- ಕರ್ನಾಟಕ ಖಜಾನೆ ಸಂಹಿತೆ.
- ಚಾಲ್ತಿ ದರಪಟ್ಟಿ.
- ಬಜೆಟ್ ಕೈಪಿಡಿ.
- ನೀರಾವರಿಗೆ ಸಂಬಂಧಪಟ್ಟಂತೆ ಪುಸ್ತಕಗಳು.

**ದಾಖಲೆಗಳು:–**

ವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲಾತಿಗಳ ಪಟ್ಟಿ.

| | |
|---|---|
| 1) | ಹಾಜರಾತಿ ವಹಿ. |
| 2) | ಪತ್ರಾಂಕಿತ ಮತ್ತು ಪತ್ರಾಂಕಿತವಲ್ಲದ ಅಧಿಕಾರಿಗಳ ಸಾಂದರ್ಭಿಕ ರಜೆ ವಹಿ ಮತ್ತು ಸಾಂದರ್ಭಿಕ ರಜೆ ಕಡತ ಅರ್ಜಿಗಳೊಂದಿಗೆ. |
| 3) | ಸಂಘಟನಾ |
| 4) | ಮಂಜೂರಾದ, ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಹುದ್ದೆಗಳ ತಖ್ತೆ: |
| 5) | ಕೆಲಸ ವಿತರಣಾ ತಖ್ತೆ: |
| 6) | ವೇತನ ಬಡ್ತಿಯ ನಿಗಾ ವಹಿ. |
| 7) | ವೇತನ ಬಡ್ತಿಯ ಮಂಜೂರಾತಿ ವಹಿ. |
| 8) | ಇನ್ ಕಂಬೆನ್ಸಿ ವಹಿ. |
| 9) | ರಹಸ್ಯ ವರದಿಗಳ ವಹಿ. |
| 10) | ಆಸ್ತಿ ಮತ್ತು ದಾಯಿತ್ವ ತಖ್ತೆ: ವಹಿ. |
| 11) | ಮಹಾಲೇಖಪಾಲರು ಮತ್ತು ಇತರರಿಗೆ ಕಳುಹಿಸಲಾದ ನಿವೃತ್ತಿ ವೇತನ ಪತ್ರಗಳ ನಿಗಾ ವಹಿ. |
| 12) | ನೌಕರರ ಸೇವಾ ವಹಿಗಳ ಪಟ್ಟಿ ಹಾಗೂ ಸೇವಾ ವಹಿಗಳ ನಿಗಾ ವಹಿ. |
| 13) | ಸೇವಾ ವಹಿ. |
| 14) | ತಾತ್ಕಾಲಿಕ ಆಡಳಿತ ವಹಿ. |
| 15) | ಇಲಾಖಾ ಪರೀಕ್ಷೆಗಳ ನಿಗಾ ವಹಿ. |
| 16) | ದೂರವಾಣಿ, ಟ್ರಂಕ್ ಕರೆಗಳ ವಹಿ. |
| 17) | ಪರಿವೀಕ್ಷಣಾ ಟಿಪ್ಪಣಿ ಪುಸ್ತಕ. |
| 18) | ಕಛೇರಿ ನೌಕರರ ಮನೆಗಳ ವಿಳಾಸ. |
| 19) | ವಿಧಾನ ಸಭೆ/ಪರಿಷತ್ ಪ್ರಶ್ನೆಗಳ ವಹಿ. |
| 20) | ಕಡತಗಳ ವಹಿ ಮತ್ತು ವೈಯಕ್ತಿಕ ವಹಿ. |
| 21) | ಪ್ರತಿ ಮಾಹೆಗಳ ಬಾಕಿ ಪಟ್ಟಿ. |
| 22) | ಸ್ಟಾಂಪು ವಹಿ ಪರಿವೀಕ್ಷಣಾ ದಿನದಂದು ಬಾಕಿ ಇರುವ ಸ್ಟಾಂಪುಗಳ ಮತ್ತು ಸ್ಟಾಂಪುಗಳ ಬೆಲೆಯನ್ನು ತೋರಿಸುವ ತಖ್ತೆ: |
| 23) | ಸಾಮಾನ್ಯ ಸ್ವೀಕೃತಿ ವಹಿ. |
| 24) | ರವಾನೆ ವಹಿ. |
| 25) | ಏಪ್ರೀಲ್ ಒಂದರಿಂದ ಬೇರೆ ಬೇರೆ ಕಛೇರಿಗಳಿಂದ ಸ್ವೀಕೃತಿಯಾದ ಮತ್ತು ರವಾನಿಸಲಾದ ಪತ್ರಗಳ ವಿವರಗಳ ತಖ್ತೆ. |
| 26) | ಶುದ್ಧ ಪತ್ರಿ ತಖ್ತೆ: |
| 27) | ಬೆರಳಚ್ಚುಗಾರರ ದಿನವಹಿ. |
| 28) | ಸ್ಥಳೀಯ ವಿತರಣಾ ರವಾನೆ. |
| 29) | ಕಛೇರಿ ಆದೇಶ ಪುಸ್ತಕ. |
| 30) | ಗೃಹ ನಿರ್ಮಾಣ ಮತ್ತು ವಾಹನ ಮುಂಗಡ ಮಂಜೂರಾತಿ ವಹಿ. |

| | |
|---|---|
| 31) | ವೈದ್ಯಕೀಯ ವೆಚ್ಚ ಮರು ಪಾವತಿ ಕಡತ. |
| 32) | ಕರ್ನಾಟಕ ಸರ್ಕಾರ ಸಾಮೂಹಿಕ ವಿಮಾ ಯೋಜನೆ ವರ್ಗಾವಾರು ವಹಿ. |
| 33) | ಕಛೇರಿ ಕೈಪಿಡಿಯಲ್ಲಿ ನಿಗದಿಪಡಿಸಿದಂತೆ ಇತರೆ ವಹಿಗಳು. |
| 34) | ಸಾಮಾನ್ಯ ಭವಿಷ್ಯ ನಿಧಿಯ ಪಾಸ್ ಪುಸ್ತಕ. |
| 35) | ಸಾಮಾನ್ಯ ನಗದು ಪುಸ್ತಕ. |
| 36) | ಪಾವತಿ ವಹಿ. |
| 37) | ನಗಧಿಕರಣ ವಹಿ. |
| 38) | ವೇತನ ಬಟಾವಡೆ ವಹಿ. |
| 39) | ಪಾವತಿಯಾಗದ ವೇತನ ವಹಿ. |
| 40) | ಪ್ರಯಾಣ ಭತ್ಯೆ ನಿಗಾ ವಹಿ. |
| 41) | ಪ್ರಯಾಣ ಭತ್ಯೆ ಬಟಾವಡೆ ವಹಿ. |
| 42) | ಪ್ರಯಾಣ ಭತ್ಯೆ ಬಿಲ್ಲುಗಳ ಪರಿಶೀಲನಾ ವಹಿ. |
| 43) | ಸಾದಿಲ್ವಾರು ವೆಚ್ಚ ವಹಿ, ವೋಚರಗಳ ಸಹಿತ. |
| 44) | ವಿಶೇಷ ವಸೂಲಾತಿಗಳ ವಹಿ. |
| 45) | ಆಡಿಟ್ ನೋಟ್, ರಿಜಾಯಿಚಿಡರ್, ಪರಿಶೀಲನಾ ಟಿಪ್ಪಣಿಗಳ ನಿಗಾ ವಹಿ. |
| 46) | ಅಧೀಕ್ಷಕ ಇಂಜಿನೀಯರ ರವರ ಅನಿರೀಕ್ಷಿತಾ ತಪಾಸಣಾ ಟಿಪ್ಪಣಿ. |
| 47) | ಅಧೀಕ್ಷಕ ಇಂಜಿನೀಯರ ರವರ ಮಾಸಿಕ ದಿನಚರಿ. |

**ತಾಂತ್ರಿಕ ಶಾಖೆ:**

1. ಭಾರಿ ಮತ್ತು ಸಣ್ಣ ಅಂದಾಜುಗಳ ಮಂಜೂರಾತಿ ವಹಿ.
2. ಪಿಡಬ್ಲ್ಯೂಡಿ ವಶದಲ್ಲಿರುವ ಸೇತುವೆ ಮತ್ತು ಕಲ್ವರ್ಟ್‌ಗಳ ವಹಿ.
3. ದರ ಸೂಚಿ.
4. ಎಂ.ಎಂ.ಆರ್. ಪುಸ್ತಕ.
5. ಹೊಸಕೆರೆ ಮತ್ತು ಜಲಾಶಯಗಳ ವಹಿ.
6. ಆಯವ್ಯಯ ಕಾಮಗಾರಿಗಳ ವಹಿ.
7. ಕೆರೆಗಳ ವಹಿ.
8. ಟೆಂಡರ್‌ಗಳ ವಹಿ.
9. ದಾಖಲಾತಿಗಳು.
10. ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜುಗಳ ಪಟ್ಟಿ.
11. ಹೆಚ್ಚುವರಿ ಐಟಂ ದರ ಪಟ್ಟಿಯ ವಹಿ.

**ಕೈಪಿಡಿ–6:–** ಇಲಾಖೆಯ ಅಧೀನದಲ್ಲಿರುವ ದಾಖಲೆಗಳ ವರ್ಗೀಕರಣದ ತಖ್ತೆ:

**ತಾಂತ್ರಿಕ ಶಾಖೆ:**

- ❖ ಅಧೀಕ್ಷಕ ಅಭಿಯಂತರವರ ಮತ್ತು ಮುಖ್ಯ ಅಭಿಯಂತರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪಟ್ಟಿಗಳು ಮತ್ತು ಅದಕ್ಕೆ ಸಂಬಂಧಪಟ್ಟ ಕಡತಗಳು.
- ❖ ಪ್ರಗತಿಯ ವರದಿಗಳು.
- ❖ ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ.

**ಆಡಳಿತ ಶಾಖೆ:**

- ❖ ಸಾಮಾನ್ಯ ಸ್ವೀಕೃತಿ ವಹಿ.
- ❖ ಸ್ಟಾಂಪು ವಹಿ.
- ❖ ಹಾಜರಿ ಪುಸ್ತಕ
- ❖ ದಾಖಲು ವಹಿ
- ❖ ಪೀಠೋಪಕರಣಗಳು ಮತ್ತು ಇತರೆ ಸಾಮಗ್ರಿಗಳ ವಹಿ
- ❖ ವಿಧಾನ ಸಭೆ ಮತ್ತು ವಿಧಾನ ಪರಿಷತ್ ಸದಸ್ಯರ ಪ್ರಶ್ನೆಗಳಿಗೆ ಉತ್ತರ ಕಳುಹಿಸುವ ಚಲನವಲನ ವಹಿ.
- ❖ ಗೃಹ ನಿರ್ಮಾಣ ಮುಂಗಡ, ವಾಹನ ಮುಂಗಡ ಚಲನವಲನ ವಹಿ
- ❖ ಕಛೇರಿ ಆದೇಶ ವಹಿ
- ❖ ಶಿಸ್ತು ಪ್ರಕರಣ ನಿಗಾ ವಹಿ

**ಕೈಪಿಡಿ–7:–** ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ.

ಏನು ಇರುವುದಿಲ್ಲ.

**ಕೈಪಿಡಿ–8:–** ಇಲಾಖೆಯಲ್ಲಿರುವ ನಿಗಮ/ಪರಿಷತ್ತು/ಸಮಿತಿ ಮತ್ತು ಇತರ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.

ಯಾವುದೂ ಇರುವುದಿಲ್ಲ.

**ಕೈಪಿಡಿ–9:–** ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ಧೇಶಿಕೆ.

ಈ ಇಲಾಖೆಯಲ್ಲಿ ಸಣ್ಣ ನೀರಾವರಿ (ಉತ್ತರ) ವಲಯದ ಮುಖ್ಯ ಅಭಿಯಂತರವರ ಅಧಿಕಾರದ ಬಗ್ಗೆ ಕೈಪಿಡಿ–2 ರಲ್ಲಿ ಈಗಾಗಲೇ ತಿಳಿಸಲಾಗಿದೆ.

ಸಿಬ್ಬಂದಿ ವರ್ಗದ ನಿರ್ಧೇಶಿಕೆ (ಸಂಘಟನಾ ನಕ್ಷೆ) ಈ ಕೆಳಗೆ ನೀಡಿದೆ.

| ಕ್ರ. ಸಂ. | ಹುದ್ದೆ ಮತ್ತು ಹೆಸರು. |
|---|---|
| 1) | **ಕಾರ್ಯನಿರ್ವಾಹಕ ಅಭಿಯಂತರು–1** |
| | (1) ಶ್ರೀ. ಎಸ್. ಮಂಜುನಾಥ ಸಜ್ಜನ |
| 2) | **ತಾಂತ್ರಿಕ ಸಹಾಯಕರು–1** |
| | (1) ಶ್ರೀ. ಬಂಡೆಪ್ಪಾ ತಮಸಂಗೆ (ಪ್ರಭಾರ) |
| 3) | **ಸಹಾಯಕ ಇಂಜನೀಯರ–2** |
| | 1) ಶ್ರೀ. ಮ. ಇಸಾಖ ಅಹ್ಮದ ಖುರೇಶಿ |
| | 2) ಶ್ರೀ. ಬಂಡೆಪ್ಪಾ ತಮಸಂಗೆ |
| 4) | **ಕಿರಿಯ ಇಂಜನೀಯರರು–3** |
| | 1) ಶ್ರೀ. ಪ್ರಭಾಕರ |
| | 2) ಶ್ರೀ. ಅನೀಸ್ ಅಹ್ಮದ್ |
| | 3) ಶ್ರೀ. ಮ.ರಫತುಲ್ಲಾ ಖಾನ್ |
| 5) | **ಅಧೀಕ್ಷಕರು–1** |
| | (1) ತಿಪ್ಪಾರೆಡ್ಡಿ ಆರ್. |
| 6) | **ಪ್ರಥಮ ದರ್ಜೆ ಸಹಾಯಕರು–2.** |
| | 1) ಶ್ರೀ. ಅಲಿಮುದ್ದಿನ |
| | 2) ಶ್ರೀ. ಸೈಯದ್ ಅವೇರ ಹುಸೇನ್ |
| 7) | **ದ್ವಿತೀಯ ದರ್ಜೆ ಸಹಾಯಕರು–2.** |
| | 1) ಶ್ರೀ. ಮಲ್ಲಿಕಾರ್ಜುನ |
| | 2) ಶ್ರೀ. ಮೊಗಲಪ್ಪಾ |
| 8) | **ಲೆಕ್ಕ ಅಧೀಕ್ಷಕರು–1** |
| | 1) ಶ್ರೀ. ಸುಭಾಷಚಂದ್ರ ನೀರಾಳೆ |
| 9) | **ಪ್ರಥಮ ದರ್ಜೆ ಲೆಕ್ಕ ಸಹಾಯಕರು–2** |
| | 1) ಶ್ರೀ. ಸಿ.ಎಫ್. ಕೂಬಿಹಾಳ, |
| | 2) ಶ್ರೀ. ಕಾಂಬಳೆ ಗಣಪತಿ ಸಿದ್ರಾಮ |
| 10) | **ದ್ವಿತೀಯ ದರ್ಜೆ ಲೆಕ್ಕ ಸಹಾಯಕರು–2** |
| | 1) ಶ್ರೀಮತಿ ರೂಪಾದೇವಿ |
| | 2) ಶ್ರೀಮತಿ ಚಂದ್ರಮ್ಮ |
| 11) | **ಅನುರೇಖಗಾರ–2** |
| | 1) ಶ್ರೀ. ಎಂ.ಎ.ಹಮೀದ |
| | 2) ಶ್ರೀ. ಮ.ಖಾಲೇದ |
| 12) | **ಶೀಘ್ರಲಿಪಿಗಾರ–1** |
| | – ಖಾಲಿ – |
| 13) | **ಪ್ರ.ದ. ಉಗ್ರಾಣ ಪಾಲಕರು –1** |
| | 1) ಶ್ರೀ. ಸ್ವಾಮಿ ದಯಾನಂದ |
| 14) | **ದ್ವಿತೀಯ ದರ್ಜೆ ಉಗ್ರಾಣ ಪಾಲಕರು–1** |
| | – ಖಾಲಿ – |
| 15) | **ಬೆರಳಚ್ಚುಗಾರರು–3.** |
| | 1) ಶ್ರೀ. ದೀಲೀಪ ಕುಮಾರ |
| | 2) ಶ್ರೀ. ಯು.ಜಿ. ದೇಶಪಾಂಡೆ |
| | 3) – ಖಾಲಿ – |

| ಕ್ರ. ಸಂ. | ಹುದ್ದೆ ಮತ್ತು ಹೆಸರು. |
|---|---|
| 16) | **ನೀಲಿ ನಕ್ಷೆಗಾರ–1** |
| | 1) ಶ್ರೀ. ವಿಖಾರುಲ್ಲಾ ಮೊಹಸಿನ. |
| 17) | **ವಾಹನ ಚಾಲಕ–1** |
| | – ಖಾಲಿ – |
| 18) | **ಅನುಚರ–1** |
| | 1) ಶ್ರೀ. ರಾಮಣ್ಣ |
| 19) | **ಜವಾನರು–2.** |
| | 1) ಶ್ರೀ. ಅಬ್ದುಲ್ ರಹೀಮ್ |
| | 2) ಶ್ರೀ. ಹುಸೇನ.ಸಾ. |
| 20) | **ಕಾವಲುಗಾರ–1** |
| | 1) ಶ್ರಿ. ಶಂಕರ ಕಾಳೆ |

**ಕೈಪಿಡಿ–10**

ಇಲಾಖೆಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದ ತಿಂಗಳ ವೇತನ/ ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು.

ಕಾರ್ಯನಿರ್ವಾಹಕ ಅಭಿಯಂತರರವರ ಕಛೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ಉಳಿದವರ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗುತ್ತಿದೆ.

| ಕ್ರ. ಸಂ. | ಹುದ್ದೆ ಮತ್ತು ಹೆಸರು | ವೇತನ ಶ್ರೇಣಿ. | ವೇತನ ಮತ್ತು ಭತ್ಯಗಳು. |
|---|---|---|---|
| 1) | **ಕಾರ್ಯನಿರ್ವಾಹಕ ಇಂಜಿನೀಯರರು –1** | | |
| | ಶ್ರೀ. ಎಸ್. ಮಂಜುನಾಥ ಸಜ್ಜನ | 9580–14200 | 24669–00 |
| 2) | **ತಾಂತ್ರಿಕ ಸಹಾಯಕರು–1** | | |
| | – ಖಾಲಿ – | – | – |
| 3) | **ಸಹಾಯಕ ಇಂಜಿನೀಯರರು–2** | | |
| | 1) ಶ್ರೀ. ಬಂಡೆಪ್ಪಾ ತಮಸಂಗೆ | 6300–11840 | 19421–00 |
| | 2) ಶ್ರೀ. ಮ. ಇಸಾಖ ಆಹ್ಮದ ಖುರೇಶಿ | 6000–11200 | 12317–00 |
| 4) | **ಕಿರಿಯ ಇಂಜನೀಯರ–3** | | |
| | 1) ಶ್ರೀ. ಪ್ರಭಾಕರ | 6000–11200 | 13923–00 |
| | 2) ಶ್ರೀ. ಅನೀಸ್ ಅಹ್ಮದ್ | 4575–8400 | 8638–00 |
| | 3) ಶ್ರೀ. ಮ.ರಫತುಲ್ಲಾ ಖಾನ್ | 4575–8400 | 9754–00 |
| 5) | **ಅನುರೇಖಗಾರರು–1.** | | |
| | 1) ಶ್ರೀ. ಎಂ.ಎ.ಹಮೀದ | 3850–7050 | 8191–00 |
| | 2) ಶ್ರೀ. ಮ.ಖಾಲೇದ | 3850–7050 | 7612–00 |
| 6) | **ಶೀಘ್ರಲಿಪಿಗಾರ–1** | | |
| | – ಖಾಲಿ – | –– | –– |
| 7) | **ಅಧೀಕ್ಷಕರು–1** | | |
| | 1) ಶ್ರೀ. ತಿಪ್ಪಾರೆಡ್ಡಿ .ಆರ್. | 5200–9580 | 11806–00 |
| 8) | **ಪ್ರ.ದ. ಸಹಾಯಕರು–2** | | |
| | 1) ಶ್ರೀ. ಅಲಿಮುದ್ದಿನ | 4150–7800 | 11003–00 |
| | 2). ಶ್ರೀ. ಸೈಯದ್ ಅಮೀರ ಹುಸೇನ | 3850–7050 | 13591–00 |
| 9) | **ದ್ವಿ.ದ.ಸಹಾಯಕರು – 2** | | |
| | 1) ಶ್ರೀ. ಮಲ್ಲಿಕಾರ್ಜುನ | 3300–6300 | 6898–00 |
| | 2) ಶ್ರೀ. ಮೊಗಲಪ್ಪಾ | 3300–6300 | 7076–00 |
| 10) | **ಲೆಕ್ಕ ಅಧೀಕ್ಷಕರು–1** | | |
| | 1) ಶ್ರೀ. ಸುಭಾಷ ಚಂದ್ರ ನೀರಾಳೆ | 5575–10620 | 16173–00 |
| 11) | **ಪ್ರ.ದ.ಲೆ. ಸಹಾಯಕರು–2** | | |
| | 1) ಶ್ರೀ. ಸಿ.ಎಫ್. ಕೂಬಿಹಾಳ್ | 4575–8400 | 11271–00 |
| | 2) ಶ್ರೀ. ಕಾಂಬಳೆಗಣಪತಿ ಸಿದ್ರಾಮ | 3850–7050 | 9530–00 |
| 12) | **ದ್ವಿ.ದ. ಲೆಕ್ಕ ಸಹಾಯಕರು –2** | | |
| | 1) ಶ್ರೀಮತಿ ರೂಪಾದೇವಿ | 3300–6300 | 6719–00 |
| | 2) ಶ್ರೀಮತಿ ಚಂದ್ರಮ್ಮ | 3000–5450 | 6541–00 |

| ಕ್ರ. ಸಂ. | ಹುದ್ದೆ ಮತ್ತು ಹೆಸರು | ವೇತನ ಶ್ರೇಣಿ. | ವೇತನ ಮತ್ತು ಭತ್ಯಗಳು. |
|---|---|---|---|
| 13) | **ಪ್ರ.ದ. ಉಗ್ರಾಣ ಪಾಲಕರು -1** | | |
| | 1) ಶ್ರೀ. ಸ್ವಾಮಿ ದಯಾನಂದ | 4575–8400 | 12877–00 |
| 14) | **ದ್ವಿ.ದ. ಉಗ್ರಾಣ ಪಾಲಕರು-1** | | |
| | 1) ಶ್ರೀ. ಎಂ.ಎಂ. ಕುಲಕರ್ಣಿ. | 3850–7050 | 13413–00 |
| 15) | **ನೀಲಿ ಮುದ್ರಕರು-1** | | |
| | 1) ಶ್ರೀ. ವಿಖಾರುಲ್ಲಾ ಮೊಹಸಿನ. | 3000–5450 | 6362–00 |
| 16) | **ಬೆರಳಚ್ಚುಗಾರ-3** | | |
| | 1) ಶ್ರೀ. ದೀಲೀಪಕುಮಾರ | 3850–7050 | 10290–00 |
| | 2) ಶ್ರೀ. ಯು.ಜಿ.ದೇಶಪಾಂಡೆ | 3300–6300 | 7166–00 |
| | 3) - ಖಾಲಿ - | -- | -- |
| 17) | **ವಾಹನ ಚಾಲಕ-1** | | |
| | - ಖಾಲಿ - | -- | -- |
| 18) | **ಅನುಚರರು - 1** | | |
| | 1) ಶ್ರೀ. ರಾಮಣ್ಣಾ. | 2725–4950 | 8311–00 |
| 19) | **ಜವಾನರು- 2** | | |
| | 1) ಶ್ರೀ. ಅಬ್ದುಲ್ ರಹೀಮ್ | 3000–5450 | 9874–00 |
| | 2) ಶ್ರೀ. .ಹುಸೇನ .ಸಾ | 2500–3850 | 5233–00 |
| 20) | **ಕಾವಲುಗಾರ-1** | | |
| | 1) ಶ್ರೀ. ಶಂಕರ ಕಾಳೆ | 2500–3850 | 4697–00 |

**ಕೈಪಿಡಿ-11:-** ಇಲಾಖೆಯಲ್ಲಿರುವ ವಲಯ/ವಿಭಾಗಗಳಿಗೆ ನೀಡುತ್ತಿರುವ ಆಯವ್ಯಯದ ವಿವರಗಳು.

ಯೋಜನೆಗಳ ವಿವರ ಮತ್ತು ವೆಚ್ಚ ಮತ್ತು ಪ್ರಸ್ತಾವಿಸಿದ ಅನುದಾನ ಮತ್ತು ಅದನ್ನು ಬಿಡುಗಡೆ ಮಾಡುವ ಬಗ್ಗೆ ವಿವರಗಳನ್ನು ಪ್ರತ್ಯೇಕವಾಗಿ ಲಗತ್ತಿಸಲಾಗಿದೆ.

**ಕೈಪಿಡಿ-12:-** ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು.

ಸಹಾಯಧನ ನೀಡುವ ಕಾರ್ಯಕ್ರಮಗಳು ಇಲ್ಲ.

**ಕೈಪಿಡಿ-13:-** ಇಲಾಖೆಯಲ್ಲಿ ನೀಡುತ್ತಿರುವ ಪರ್ಮಿಟ್ ಅಥವಾ ಅಧಿಕಾರ ಪತ್ರಗಳ ವಿವರ ಮತ್ತು ರಿಯಾಯಿತಿ ಪಡೆಯುವವರ ವಿವರ.

ಯಾವುದು ಇಲ್ಲ.

**ಕೈಪಿಡಿ-14:-** ಇಲಾಖೆಯಲ್ಲಿರುವ ಮಾಹಿತಿಯನ್ನು ವೆಬ್ ಸೈಟ್‌ನಲ್ಲಿ ನೀಡಿರುವ ಬಗ್ಗೆ ವಿವರ.

ಇಲಾಖೆಯಲ್ಲಿ ವೆಬ್ ಸೈಟ್‌ನ್ನು ಯಾವುದೂ ಇಲ್ಲ.

**ಕೈಪಿಡಿ-15:-** ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ.

ಸಾರ್ವಜನಿಕರು ಕಾರ್ಯಪಾಲಕ ಇಂಜಿನೀಯರ, ಸಣ್ಣ ನೀರಾವರಿ ವಿಭಾಗ, ಬೀದರ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಬಂಡೆಪ್ಪಾ ತಮಸಂಗೆ ತಾಂತ್ರಿಕ ಸಹಾಯಕರು ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

ಕಛೇರಿಯ ಸಮಯದ ವೇಳೆಯಲ್ಲಿ ಮೇಲ್ಕಂಡ ಅಧಿಕಾರಿಗಳ ದೂರವಾಣಿ ಸಂಖ್ಯೆ: 08482232080 ಫ್ಯಾಕ್ಸ್ - 08482232080.

ಸಾರ್ವಜನಿಕರಿಗೆ ಬಳಕೆಗೆ ವಾಚನಾಲಯ ಲಭ್ಯವಿರುವುದಿಲ್ಲ.

**ಕೈಪಿಡಿ-16:-** ಇಲಾಖೆಯಲ್ಲಿರುವ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ಇತರ ವಿವರಗಳು.

ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಮತ್ತು ಪದನಾಮ:

ಸಾರ್ವಜನಿಕರು ಕಾರ್ಯಪಾಲಕ ಇಂಜಿನೀಯರ, ಸಣ್ಣ ನೀರಾವರಿ ವಿಭಾಗ, ಬೀದರ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಬಂಡೆಪ್ಪಾ ತಮಸಂಗೆ ತಾಂತ್ರಿಕ ಸಹಾಯಕರು ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

**ಕೈಪಿಡಿ-17:-** ಇತರೆ ವಿವರಗಳು.

**ಎಸ್. ಮಂಜುನಾಥ ಸಜ್ಜನ**
ಕಾರ್ಯನಿರ್ವಾಹಕ ಅಭಿಯಂತರರು,
ಸಣ್ಣ ನೀರಾವರಿ ವಿಭಾಗ, ಬೀದರ

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**
**ಕಾರ್ಯನಿರ್ವಾಹಕ ಇಂಜಿನಿಯರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೀದರ.**
**ಅಧಿಸೂಚನೆ**
**ಸಂ.ಕಾನಿಇ:ಸನೀ/ವಿಬಿ/2005-06/3162/7, ದಿನಾಂಕ: 11ನೇ ಅಕ್ಟೋಬರ್ 2005**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22) ರ ಅಡಿಯಲ್ಲಿ ಕಾರ್ಯನಿರ್ವಾಹಕ ಅಭಿಯಂತರರು ಸಣ್ಣ ನೀರಾವರಿ ವಿಭಾಗ ಬೀದರ ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್ -5 (1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು "ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 19 (1) ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಕ್ರ. ಸಂ. | ಕಛೇರಿ ಮತ್ತು ವಿಳಾಸ. | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2). | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1 | ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ ಬೀದರ. | ತಾಂತ್ರಿಕ ಸಹಾಯಕ-1 ಕಾರ್ಯನಿರ್ವಾಹಕ ಅಭಿಯಂತರರವರ ಕಛೇರಿ ಸಣ್ಣ ನೀರಾವರಿ ವಿಭಾಗ, ಬೀದರ. | ಸಹಾಯಕ ಅಭಿಯಂತರರು (ಸೇವೆಯಲ್ಲಿ ಹಿರಿಯರು) ಕಾರ್ಯನಿರ್ವಾಹಕ ಅಭಿಯಂತರರವರ ಕಛೇರಿ ಸಣ್ಣ ನೀರಾವರಿ ವಿಭಾಗ ಬೀದರ. | ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ ಬೀದರ. |

**ಎಸ್. ಮಂಜುನಾಥ ಸಜ್ಜನ್**
ಕಾರ್ಯನಿರ್ವಾಹಕ ಇಂಜಿನಿಯರರು,
ಸಣ್ಣ ನೀರಾವರಿ ವಿಭಾಗ, ಬೀದರ.

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**
**ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರವರ ಕಛೇರಿ,**
**ಸಣ್ಣ ನೀರಾವರಿ ಉಪ ವಿಭಾಗ, ಬಸವಕಲ್ಯಾಣ.**
**ಸಂ.ಸಕಾನಿಇ:ಸನೀ/ಉವಿ/ಸಿ- /2005-06/481-89, ದಿನಾಂಕ: 11ನೇ ಅಕ್ಟೋಬರ್ 2005**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22 )ರ ಅಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಸಣ್ಣ ನೀರಾವರಿ ಉಪ ವಿಭಾಗ ಬಸವಕಲ್ಯಾಣ ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್ -5(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು "ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 19 (1) ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಕ್ರ. ಸಂ. | ಕಛೇರಿ ಮತ್ತು ವಿಳಾಸ. | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2). | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪ ವಿಭಾಗ ಬಸವಕಲ್ಯಾಣ. | ಸಹಾಯಕ ಅಭಿಯಂತರು (ಸೇವೆಯಲ್ಲಿ ಹಿರಿಯರು) ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರವರ, ಕಛೇರಿ ಸಣ್ಣ ನೀರಾವರಿ ಉಪ ವಿಭಾಗ ಬಸವಕಲ್ಯಾಣ. | ಪ್ರಥಮ ದರ್ಜೆ ಸಹಾಯಕ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರವರ, ಕಛೇರಿ ಸಣ್ಣ ನೀರಾವರಿ ಉಪ ವಿಭಾಗ ಬಸವಕಲ್ಯಾಣ. | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪ ವಿಭಾಗ ಬಸವಕಲ್ಯಾಣ.. |

ಸಹಾಯಕ ಕಾರ್ಯನಿರ್ವಾಹಕ,
ಅಭಿಯಂತರರವರ ಸಣ್ಣ ನೀರಾವರಿ ಉಪ ವಿಭಾಗ, ಬಸವಕಲ್ಯಾಣ.

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**
**ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರವರ ಕಛೇರಿ,**
**ಸಣ್ಣ ನೀರಾವರಿ ಉಪ ವಿಭಾಗ, ಬೀದರ.**
**ಅಧಿಸೂಚನೆ**
**ಸಂ.ಸಕಾನಿಇ:ಸನೀ/ಉವಿ/ಸಿ- /2005-06/796/1 ದಿನಾಂಕ: 11ನೇ ಅಕ್ಟೋಬರ್ 2005**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22 )ರ ಅಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಸಣ್ಣ ನೀರಾವರಿ ಉಪ ವಿಭಾಗ ಬೀದರ ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್-5(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು "ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 19 (1) ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಕ್ರ. ಸಂ. | ಕಛೇರಿ ಮತ್ತು ವಿಳಾಸ. | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2). | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪ ವಿಭಾಗ ಬೀದರ | ಸಹಾಯಕ ಅಭಿಯಂತರರು(ಸೇವೆಯಲ್ಲಿ ಹಿರಿಯರು) ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರವರ, ಕಛೇರಿ ಸಣ್ಣ ನೀರಾವರಿ ಉಪ ವಿಭಾಗ ಬೀದರ | ಪ್ರಥಮ ದರ್ಜೆ ಸಹಾಯಕ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರವರ, ಕಛೇರಿ ಸಣ್ಣ ನೀರಾವರಿ ಉಪ ವಿಭಾಗ ಬೀದರ | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪ ವಿಭಾಗ ಬೀದರ |

**ಎಸ್. ಮುರುಳೀಧರ**

ಪಿ.ಆರ್. 891

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರವರ
ಸಣ್ಣ ನೀರಾವರಿ ಉಪ ವಿಭಾಗ, ಬೀದರ.

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ

**ವಿಷಯ:** ವ್ಯವಸಾಯ ಸೇವಾ ಸಹಕಾರ ಸಂಘ ನಿ ಮಾಚಗೊಂಡನಹಳ್ಳಿ ದೊಡ್ಡಬಳ್ಳಾಪುರ ತಾಲ್ಲೂಕು ಸಂಘಕ್ಕೆ ಕಲಂ 31(1) ರಡಿ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಆದೇಶ ಸಂ: ಎಆರ್ 47/ಚುನಾವಣೆ/15/2005-06 ದಿನಾಂಕ:15.2.2006.

2. ಕಾರ್ಯದರ್ಶಿ, ವ್ಯವಸಾಯ ಸೇವಾ ಸಹಕಾರ ಸಂಘ ನಿ ಮಾಚಗೊಂಡನಹಳ್ಳಿ ದೊಡ್ಡಬಳ್ಳಾಪುರ ತಾಲ್ಲೂಕು ಇವರ ಪತ್ರ ದಿನಾಂಕ:17.3.2006.

**ಪ್ರಸ್ತಾವನೆ:**

ವ್ಯವಸಾಯ ಸೇವಾ ಸಹಕಾರ ಸಂಘ ನಿ ಮಾಚಗೊಂಡನಹಳ್ಳಿ ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ 2006-07 ರಿಂದ 2010-11ನೇ ಸಾಲುಗಳ ಅವಧಿಗೆ ಆಡಳಿತ ಮಂಡಳಿ ನಡೆಸಲು ಚುನಾವಣಾಧಿಕಾರಿಯನ್ನು ಉಲ್ಲೇಖಿತ (1)ರಡಿ ನೇಮಿಸಲಾಗಿತ್ತು. ಉಲ್ಲೇಖಿತ (2) ರಡಿ ಸದರಿ ಬ್ಯಾಂಕಿನ ಕಾರ್ಯದರ್ಶಿ ಈ ಕಛೇರಿಗೆ ಪತ್ರ ಬರೆಯುತ್ತಾ ಸಂಘದ ಆರ್ಥಿಕ ಪರಿಸ್ಥಿತಿ ಸರಿ ಇಲ್ಲದ ಕಾರಣದಿಂದ ಹಣಕಾಸಿನ ವ್ಯವಸ್ಥೆ ಮಾಡುವವರೆಗೆ ಚುನಾವಣೆ ಜರುಗಿಸಲು ಸಾಧ್ಯವಿಲ್ಲವೆಂದು ತಿಳಿಸಿರುತ್ತಾರೆ. ಸದರಿ ಸಂಘದ ಆಡಳಿತದಲ್ಲಿ ಶೂನ್ಯ ಉಂಟಾಗಿರುವುದರಿಂದ ಕಲಂ 31(1)ರಡಿ ಸದರಿ ಸಂಘಕ್ಕೆ ವಿಶೇಷಾಧಿಕಾರಿಯ ನೇಮಕ ಅವಶ್ಯಕ ಎಂದು ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

### ಆದೇಶ

### ಸಂಖ್ಯೆ: ಎಆರ್-47/ವಿ.ನೇ/7/2006-07, ದಿನಾಂಕ: 1ನೇ ಏಪ್ರಿಲ್ 2006

ಹಿದಾಯತ್ ಉಲ್ಲಾಖಾನ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿ.ಎಂ.ಡಬ್ಲ್ಯು/69/ಸಿಎಲ್ಎಂ/2001 ದಿನಾಂಕ: 21.11.2001ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ವ್ಯವಸಾಯ ಸೇವಾ ಸಹಕಾರ ಸಂಘ ನಿ ಮಾಚಗೊಂಡನಹಳ್ಳಿ ದೊಡ್ಡಬಳ್ಳಾಪುರ ತಾ: ಈ ಸಂಘಕ್ಕೆ ವಿಶೇಷಾಧಿಕಾರಿಗಳನ್ನಾಗಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ (ನಿ) ದೊಡ್ಡಬಳ್ಳಾಪುರ ಶಾಖೆಯ ಮೇಲ್ವಿಚಾರಕರಾದ ಶ್ರೀ ಕೆಂಪೇಗೌಡ ಇವರನ್ನು ನೇಮಕ ಮಾಡಿರುತ್ತೇನೆ.

ವಿಶೇಷಾಧಿಕಾರಿಗಳು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಯೊಳಗೆ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೆ ಸಂಘದ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಬ್ಯಾಂಕಿನ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಸಂಘದ ಉಪ ನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ನಿರ್ವಹಿಸುವುದು ವಿಶೇಷಾಧಿಕಾರಿಗಳ ಅಧಿಕಾರಾವಧಿಯು ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತಗೊಂಡ ಆಡಳಿತ ಮಂಡಳಿಗೆ ಅಧಿಕಾರ ವಹಿಸಿ ಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ಇಂದು ದಿನಾಂಕ: 1ನೇ ಏಪ್ರಿಲ್ 2006 ರಂದು ಹೊರಡಿಸಿರುತ್ತೇನೆ.

**ಹಿದಾಯತ್ ಉಲ್ಲಾ ಖಾನ್**

ಪಿ.ಆರ್. 868

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಂತಿಮ ಅಧಿಸೂಚನೆ ನಂ: ಜಿನಕೋ SLM. CR 11/2005-06, ದಿನಾಂಕ: 29ನೇ ಏಪ್ರಿಲ್ 2006

ಶಿವಮೊಗ್ಗ ನಗರಸಭೆ ವ್ಯಾಪ್ತಿಯಲ್ಲಿನ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ತಗ್ಗಾದ ಜಾಗಗಳಿದ್ದು, ಸದರಿ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿ ಹಾಗೂ ಜನ ಸಂದಣಿಯಿಂದ ಕೂಡಿದ್ದು, ಹಾಲಿ ಇರುವ ಗುಡಿಸಲು/ಕಟ್ಟಡಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನ)

ಕಾಯಿದೆ 1973ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಲು ಪ್ರಾಥಮಿಕ ಅಧಿಸೂಚನೆಯನ್ನು ಅಧಿಸೂಚನೆ ನಂ. ಜಿನಕೋ SLM. CR 11/2005-06 ದಿ: 30.11.2005ರಂತೆ ಕರ್ನಾಟಕ ರಾಜ್ಯ ಪತ್ರದ ಭಾಗ-3ರಲ್ಲಿ ತಾ: 2.2.2006ರಲ್ಲಿ ಪುಟಸಂಖ್ಯೆ 469ರಂತೆ ಪ್ರಕಟಿಸಲಾಗಿದೆ. ಈ ವಿಚಾರದಲ್ಲಿ ಯಾವುದೇ ತಕರಾರು ಬಂದಿಲ್ಲವೆಂದು ವರದಿಯಾಗಿದೆ. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರುರವರು ತಾ:10.8.2005ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಅಂಗೀಕರಿಸಲಾಗಿದೆ.

ಶಿವಮೊಗ್ಗ ನಗರಸಭೆ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಈ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿದ್ದು, ಜನ ಸಂದಣಿಯಿಂದ ಕೂಡಿದೆ. ಈ ಪ್ರದೇಶದಲ್ಲಿರುವ ಗುಡಿಸಲು/ಶೆಡ್‌ಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದು ದೃಢಪಡುವುದರಿಂದ ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯಿದೆ 1973ರ ಕಲಂ 03 ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಟಿ.ಕೆ. ಅನಿಲ್ ಕುಮಾರ್, ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆಗಿರುವ ನಾನು ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು 'ಕೊಳಚೆ ಪ್ರದೇಶ' ಎಂದು ಘೋಷಿಸುತ್ತೇನೆ.

**ಷೆಡ್ಯೂಲ್**

| ಕ್ರ. ಸಂ. | ಪ್ರದೇಶದ ಹೆಸರು ಮತ್ತು ಸದರಿ ಪ್ರದೇಶವು ಇರುವ ಸ್ಥಳದ ವಿವರ | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ಮಾಲೀಕರ ಹೆಸರು | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ವಿವರ | | |
|---|---|---|---|---|---|
| | | | ತಾಲ್ಲೂಕು/ಗ್ರಾಮ/ಸ. ನಂ. | ವಿಸ್ತೀರ್ಣ ಎಕರೆ ಗುಂಟೆ | ಚಕ್ಕುಬಂದಿ |
| 1. | ಶಿವಮೊಗ್ಗ ನಗರ ಕುಂಬಾರಗುಂಡಿ, ಕೊಳಚೆ ಪ್ರದೇಶ | ನಗರ ಸಭೆ ಶಿವಮೊಗ್ಗ | ಶಿವಮೊಗ್ಗ ತಾಲ್ಲೂಕು ನಗರಸಭೆ ಅಸೆಸ್‌ಮೆಂಟ್ ನಂ. 783 | 2.38 | ಪೂರ್ವಕ್ಕೆ ಮಾಡ್ರನ್ ಟಾಕೀಸ್‌ನಿಂದ ಹೊಳೆಗೆ ಸೇರುವ ಚರಂಡಿ<br>ಪಶ್ಚಿಮಕ್ಕೆ ಮಂಜುನಾಥ ಚಿತ್ರಮಂದಿರ, ಬಿ.ಬಿ. ಸ್ಟ್ರೀಟ್ ಸ್ಕೂಲ್ ರಸ್ತೆ, ಮಹಾಕವಿ ಕಾಳಿದಾಸ ರಸ್ತೆ.<br>ಉತ್ತರಕ್ಕೆ ಶ್ರೀನಿವಾಸ ಅಯ್ಯಂಗಾರ್, ನರಸಿಂಗರಾವ್ ಮತ್ತು ಶ್ರೀಧರ್ ರವರ ಖಾಸಗೀ ಮನೆ<br>ದಕ್ಷಿಣಕ್ಕೆ ಚನ್ನಪ್ಪಸ್ವಾಮಿ ಮಠದ ರಸ್ತೆ |

**ಟಿ.ಕೆ. ಅನಿಲ್ ಕುಮಾರ್**

ಪಿ.ಆರ್. 879 ಜಿಲ್ಲಾಧಿಕಾರಿ, ಶಿವಮೊಗ್ಗ

## ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿಕೆಗಳು

**ಸಂಖ್ಯೆ: ಸಿಬ್ಬಂದಿ(2):ಶಿಸ್ತು ಟ್ರ್ಯಾಪ್-03:2000-2001, ದಿನಾಂಕ: 3ನೇ ಮೇ 2006**

**ವಿಷಯ:** ಶ್ರೀ ಎ.ಐ. ಸವಣೂರ, ಜವಾನ (ಈ ಹಿಂದಿನ ತಾ.ಭೂ.ಕ. ರಾಣೆಬೆನ್ನೂರು, ಹಾವೇರಿ ಜಿಲ್ಲೆ) ಹಿಂದಿನ ಭೂಸನಿ, ಹಾವೇರಿ ಅಧೀನ ಇವರ ಮೇಲಿನ ಲಂಚ ಸ್ವೀಕಾರ ಪ್ರಕರಣದಲ್ಲಿ ಆರೋಪವು ಸಾಬೀತಾಗಿದ್ದು, ಸದರಿಯವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಉಲ್ಲೇಖ:**
1. ಕರ್ನಾಟಕ ಲೋಕಾಯುಕ್ತ, ಪೊಲೀಸ್ ವಿಂಗ್ ಬೆಂಗಳೂರು ಇವರ ಪತ್ರ ಸಂಖ್ಯೆ:ಎಲ್‌ಒಕೆ:ಐಎನ್‌ವಿ(ಜಿ):ಎಲ್-15: ಸಿಆರ್.5:2000, ದಿನಾಂಕ: 6.6.2000.
2. ಹಿಂದಿನ ಭೂ.ಜಂನಿ.ಬೆಳಗಾಂ ಇವರ ನಡವಳಿ ಸಂಖ್ಯೆ:ಸಿಬ್ಬಂದಿ.(ಟ್ರ್ಯಾಪ್):ಅಮಾನತ್ತು 20:2000-2001, ದಿನಾಂಕ: 20.6.2000,18.9.2000 ಮತ್ತು 24.10.2000.
3. ಹಾವೇರಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ವಿಶೇಷ ಸಂಖ್ಯೆ:23:2001, ದಿನಾಂಕ:1.9.2005.
4. ಅಪರ ಪೊಲೀಸ್ ಮಹಾ ನಿರ್ದೇಶಕರು, ಕ.ಲೋ.ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್:ಐಎನ್‌ವಿ:(ಜಿ): ಎಲ್-15:ಸಿಆರ್-5:2000:ಡಿಹೆಚ್‌ಆರ್, ದಿನಾಂಕ: 18.10.2005.
5. ಈ ಕಛೇರಿಯ ಪತ್ರದ ಸಂಖ್ಯೆ:ಸಿಬ್ಬಂದಿ (2):ಶಿಸ್ತು ಟ್ರ್ಯಾಪ್ 3:2000-2001, ದಿನಾಂಕ: 30.12.2005.
6. ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 9 ಸೇಇವಿ:95:ದಿನಾಂಕ:26.6.96.
7. ಸರ್ಕಾರದ ಪತ್ರ ಸಂಖ್ಯೆ:ಕಂಇ 12 ಭೂದಾಸೇ (4) 2006, ದಿನಾಂಕ:24.2.2006.

**ಪ್ರಸ್ತಾವನೆ:**

ಶ್ರೀ ಎ.ಐ. ಸವಣೂರ, ಜವಾನ, ಈ ಹಿಂದಿನ ತಾಲ್ಲೂಕು ಭೂಮಾಪನ ಕಛೇರಿ, ರಾಣೆಬೆನ್ನೂರು, ಹಾವೇರಿ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಶ್ರೀ ಹೆಚ್.ಡಬ್ಲ್ಯು. ಹಾದಿಮನಿ ಸಾ: ಎಲೇತುಪ್ಪ, ರಾಣೇಬೆನ್ನೂರು ತಾಲ್ಲೂಕು, ಹಾವೇರಿ ಜಿಲ್ಲೆಯ ನಿವಾಸಿ ಆದ ಇವರು ದಿನಾಂಕ: 22.3.2000 ರಂದು ರಾಣೇಬೆನ್ನೂರು ತಾಲ್ಲೂಕು ಭೂಮಾಪನ ಕಛೇರಿಗೆ ಹಾಜರಾಗಿ, ಯಾರೇಗುಪ್ಪ ಗ್ರಾಮದ ಸರ್ವೆ ನಂ.29:7,8ರ ಜಮೀನಿನ ಟಿಪ್ಪಣಿ ಉತಾರ್ ನಕಾಶೆ ಮತ್ತು ಯರೇಕುಪ್ಪೆ ಗ್ರಾಮದ ನಕಾಶೆ ಹಾಗೂ ಜಿನಕನಕೊಂಡ ಗ್ರಾಮದ ಸ.ನಂ.29,30ರ ಜಮೀನಿನ ಟಿಪ್ಪಣಿ ಉತಾರ, ನಕಾಶೆ ಮತ್ತು ಜಿನಕನಕೊಂಡ ಗ್ರಾಮದ ನಕಾಶೆ ಇವುಗಳನ್ನು ಕೊಡಿಸುವ ಸಂಬಂಧ ರೂ.600.00 ಲಂಚ ಕೇಳಿದರೆಂದೂ, ಫಿರ್ಯಾದುದಾರರು ಲಂಚ ಕೊಡಲು ಒಪ್ಪದೆ, ದಿನಾಂಕ:22.3.2000 ರಂದು ಆರೋಪಿತ ನೌಕರರ ವಿರುದ್ಧ ಧಾರವಾಡ ಲೋಕಾಯುಕ್ತರಲ್ಲಿ ದೂರು ದಾಖಲಿಸಿದ್ದು, ದೂರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಸೆಕ್ಷನ್ 7(13)(1) ಡಿ ಜೊತೆಗೆ 13(2) ಅನ್ನು ಓದಿಕೊಂಡು ಧಾರವಾಡ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಕೇಸ್ ನಂ.5:2000 ದಾಖಲಿಸಿಕೊಂಡು ಅದೇ ದಿನಾಂಕ:22.3.2000 ರಂದು ಆರೋಪಿತ ನೌಕರರ ವಿರುದ್ಧ ಬಲೆ ಬೀಸಿ, ರೂ.600.00 ಗಳ ಹಣವನ್ನು ಕೇಳಿ

ಪಡೆಯಲಾಯಿತು. ಎಂದೂ, ಹಾಗೂ ಅವರು ಪಡೆದಿದ್ದ ಲಂಚದ ಹಣವನ್ನು ಪೂರ್ಣವಾಗಿ ವಸೂಲ್ಮಾಡಿ, ಅವರನ್ನು ದಸ್ತಗಿರಿ ಮಾಡಿ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಯಿತೆಂದು, ಲಂಚ ಸ್ವೀಕರಿಸಿರುವುದು ಮೇಲ್ನೋಟಕ್ಕೆ ಕಂಡುಬಂದ ಕಾರಣ, ಅವರನ್ನು ಅಮಾನತ್ತಿನಲ್ಲಿಡಲು ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಪೊಲೀಸ್ ವಿಂಗ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ದಿನಾಂಕ: 6.6.2000 ರಂದು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಈ ಹಿಂದಿನ ಭೂದಾಖಲೆಗಳ ಸಂಯುಕ್ತ ನಿರ್ದೇಶಕರು, ಬೆಳಗಾಂ ರವರು ದಿನಾಂಕ:20.6.2000ದ ನಡೆವಳಿಯಲ್ಲಿ ಸದರಿ ಆರೋಪಿತ ನೌಕರರನ್ನು ಅಮಾನತ್ತಿನಲ್ಲಿಟ್ಟು ಅವರು ಹೊಂದಿರುವ ಹುದ್ದೆಯ ಮೇಲಿನ ಹಕ್ಕನ್ನು ಹಿಂದಿನ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಸವಣೂರು ಕಛೇರಿಗೆ ವರ್ಗಾಯಿಸಲಾಗಿರುತ್ತದೆ. ನಂತರ ದಿನಾಂಕ: 24.10.2000 ರ ಆದೇಶದಲ್ಲಿ ಅಮಾನತ್ತಿನಿಂದ ತೆರವುಗೊಳಿಸಿ, ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿರಸಿ ಕಛೇರಿಗೆ ಪುನರ್ ನೇಮಕ ಮಾಡಿರುತ್ತಾರೆ.

ಇವರ ವಿರುದ್ದದ ಕ್ರಿಮಿನಲ್ ಪ್ರಕರಣವು ಹಾವೇರಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ವಿಶೇಷ ಸಂಖ್ಯೆ:23:2001ರಲ್ಲಿ ದಿನಾಂಕ:21.10.2001 ರಂದು ಆರೋಪಿಯನ್ನು ಅಭಿಯೋಜನೆಗೆ ಒಳಪಡಿಸಿದ್ದು, ಆರೋಪಿ ವಿರುದ್ದ ಆರೋಪವು ಸಾಬೀತಾಗಿ ದಿ:1.9.2005 ರಂದು ಹಾವೇರಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ವಿಶೇಷ ನ್ಯಾಯಾಧೀಶರು ತೀರ್ಪು ನೀಡಿ ಆರೋಪಿಗೆ 1988ರ ಲಂಚ ನಿರೋಧ ಕಾಯಿದೆ ಕಲಂ 7 ರಲ್ಲಿ ಮಾಡಿದ ಅಪರಾಧಕ್ಕಾಗಿ ಆರೋಪಿಗೆ ಆರು ತಿಂಗಳ ಸಾದಾ ಜೈಲು ವಾಸದ ಶಿಕ್ಷೆ ಮತ್ತು 500.00 ರೂಪಾಯಿಗಳ ದಂಡ, ದಂಡ ಕೊಡಲು ತಪ್ಪಿದಲ್ಲಿ ಇನ್ನು ಒಂದು ತಿಂಗಳ ಸಾದಾ ಜೈಲುವಾಸದ ಶಿಕ್ಷೆ ಮತ್ತು ಸದರಿ ಕಾಯಿದೆ ಕಲಂ 13(1)(ಡಿ) ಸಹವಾಚಕ 13(2)ರ ಕೆಳಗೆ ಮಾಡಿದ ಅಪರಾಧಕ್ಕಾಗಿ ಆರೋಪಿಗೆ ಒಂದು ವರ್ಷ ಸಾದಾ ಜೈಲು ವಾಸದ ಶಿಕ್ಷೆ ಮತ್ತು ರೂ.500.00 ರೂಪಾಯಿಗಳ ದಂಡ, ದಂಡ ಕೊಡಲು ತಪ್ಪಿದಲ್ಲಿ ಇನ್ನು ಒಂದು ತಿಂಗಳ ಸಾದಾ ಜೈಲುವಾಸದ ಶಿಕ್ಷೆ ವಿಧಿಸಿ ಆದೇಶ ನೀಡಿರುತ್ತಾರೆ.

ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 18.10.2005ರ ಪತ್ರದಲ್ಲಿ ಆರೋಪಿತ ನೌಕರನು ಮಾಡಿದ ಅಪರಾಧಕ್ಕಾಗಿ ಹಾವೇರಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಆರೋಪವು ಸಾಬೀತಾಗಿರುವುದರಿಂದ, ಆರೋಪಿತ ನೌಕರರನ್ನು ತಕ್ಷಣದಿಂದ ಸೇವೆಯಿಂದ ವಜಾಗೊಳಿಸುವಂತೆ ಸೂಕ್ತ ಕ್ರಮ ಕೈಗೊಳ್ಳಲು ಕೋರಿರುತ್ತಾರೆ.

ಈ ಮಧ್ಯೆ ಘನ ಹೈಕೋರ್ಟ್, ಬೆಂಗಳೂರು ದಿನಾಂಕ:4.10.2005ರ ಜೆರಾಕ್ಸ್ ಪ್ರತಿಯ ಆದೇಶವು ಈ ಕಛೇರಿಗೆ ದಿನಾಂಕ:6.12.2005 ರಂದು ಸ್ವೀಕೃತವಾಗಿದ್ದು, ಸದರಿ ಆದೇಶದಲ್ಲಿ, ದಿನಾಂಕ:1.9.2005 ರಂದು ಹಾವೇರಿ ಪ್ರಧಾನ ಜಿಲ್ಲಾ ನ್ಯಾಯಾಲಯವು ನೀಡಿದ ತೀರ್ಪನ್ನು ಅಮಾನತ್ತಿನಲ್ಲಿರಿಸಿ ಆದೇಶವನ್ನು ನೀಡಿರುತ್ತಾರೆ.

ನಂತರ ಈ ಕಛೇರಿಯ ದಿನಾಂಕ: 30.12.2005ರ ಪತ್ರದಲ್ಲಿ ಹಾವೇರಿ ಸತ್ರ ನ್ಯಾಯಾಲಯದ ತೀರ್ಪನ್ನು ಮಾನ್ಯ ಉಚ್ಚ ನ್ಯಾಯಾಲಯವು ಅಮಾನತ್ತಿನಲ್ಲಿರಿಸಿದ್ದ ಬಗ್ಗೆ ಹಾಗೂ ಹಾವೇರಿ ಸತ್ರ ನ್ಯಾಯಾಲಯದ ತೀರ್ಪಿನ ಅನ್ವಯ ಲೋಕಾಯುಕ್ತರ ಸೂಚನೆ ಮೇರೆಗೆ ಆರೋಪಿತ ನೌಕರರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ ಕಾನೂನು ಇಲಾಖೆಯಿಂದ ಸ್ಪಷ್ಟೀಕರಣ ಪಡೆದು, ಅಭಿಪ್ರಾಯವನ್ನು ಕಳುಹಿಸಿಕೊಡುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿತ್ತು.

ಅದರಂತೆ ಸರ್ಕಾರದ ದಿನಾಂಕ:24.2.2006ರ ಪತ್ರದಲ್ಲಿ ಪ್ರಸ್ತುತ ಪ್ರಕರಣದಲ್ಲಿ ಆಪಾದಿತರಾದ ಶ್ರೀ ಎ.ಐ. ಸವಣೂರ, ಜವಾನ ಇವರಿಗೆ ಹಾವೇರಿ ಜಿಲ್ಲಾ ಸೆಷನ್ಸ್ ನ್ಯಾಯಾಲಯವು ವಿಧಿಸಿರುವ ಸೆರೆಮನೆ ವಾಸದ ಶಿಕ್ಷೆಗೆ ಮಾತ್ರ ಮಾನ್ಯ ಉಚ್ಚ ನ್ಯಾಯಾಲಯವು ತಡೆಯಾಜ್ಞೆ ನೀಡಿರುವುದರಿಂದ, ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 9 ಸೇಇವಿ 2005, ದಿನಾಂಕ: 26.6.1996 ರಲ್ಲಿನ ಸೂಚನೆಗಳಂತೆ ಸೂಕ್ತ ಕ್ರಮ ಜರುಗಿಸಲು ನಿರ್ದೇಶನವನ್ನು ನೀಡಿರುತ್ತಾರೆ

ಈ ಮೇಲಿನ ಅಂಶವನ್ನು ಗಮನದಲ್ಲಿಟ್ಟುಕೊಂಡು ಪ್ರಕರಣದಲ್ಲಿ ವಿಚಾರಣೆ ನಡೆಸಿದ ಹಾವೇರಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ವಿಶೇಷ ನ್ಯಾಯಾಧೀಶರು ನೀಡಿರುವ ತೀರ್ಪನ್ನು ಹಾಗೂ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಆದೇಶ ಮತ್ತು ಸರ್ಕಾರದ ಸುತ್ತೋಲೆ ದಿನಾಂಕ: 26.6.1996 ಹಾಗೂ ಸರ್ಕಾರದ ಪತ್ರದ ದಿನಾಂಕ:24.2.2006ರ ಆದೇಶಗಳನ್ನು ಪರಿಶೀಲಿಸಲಾಗಿ, ಸಂವಿಧಾನದ ಅನುಚ್ಛೇದ 311(2)ರ ಅಡಿಯಲ್ಲಿನ ಎರಡನೇ ಪರಂತುಕದ ಖಂಡ (ಎ) ಯು "ಕ್ರಿಮಿನಲ್ ಆರೋಪದ ಮೇಲೆ ದೋಷ ಸಿದ್ಧಿಯಾಗುವಂತೆ ಮಾಡಿದ ನಡತೆಯ ಬಗ್ಗೆ ಹೇಳುತ್ತದೆಯಾದ್ದರಿಂದ ದೋಷಸಿದ್ಧಿಯಾಗಿರುವುದನ್ನು ನಿಲಂಬನದಲ್ಲಿಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಆದ್ದರಿಂದ ಅಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರ ವ್ಯವಹರಣೆ ಹೂಡಿದ್ದಾನೆ, ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನೆಯಲ್ಲಿಟ್ಟಿದೆ ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾನೆ" ಎಂಬ ಕಾರಣಕ್ಕಾಗಿ ಇವರ ವಿರುದ್ಧ ಕ್ರಿಮಿನಲ್ ಪ್ರಕರಣವು ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 57ರ ನಿಯಮ 14(i) ರ ಅನುಸಾರ ಸದರಿ ನಿಯಮಗಳ ನಿಯಮಗಳು 11, 12 ಮತ್ತು 13 ರಲ್ಲಿ ಏನೇ ಹೇಳಲಾಗಿದ್ದರೂ ಕ್ರಿಮಿನಲ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಆರೋಪಕ್ಕಾಗಿ ದೋಷಸಿದ್ಧಿಯಾದ ಸರ್ಕಾರಿ ನೌಕರರನ್ನು ಪುನಃ ಇಲಾಖಾ ವಿಚಾರಣೆಗೆ ಒಳಪಡಿಸದೆಯೇ ಸೇವೆಯಿಂದ ವಜಾ ಮಾಡುವ ಬಗ್ಗೆ ಸೂಚನೆಗಳಿರುವ ಕಾರಣ ಆರೋಪಿತ ನೌಕರರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದಲ್ಲಿ ಜಿ.ವಿ. ರಾಮಚಂದ್ರ, ಭಾ.ಆ.ಸೇ., ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 9(3) ರಲ್ಲಿ ಓದಿಕೊಂಡು ನಿಯಮ 8 (viii) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಐ. ಸವಣೂರ, ಬಾಂದು ಜವಾನರು, ತಹಶೀಲ್ದಾರ್, ಹಾವೇರಿ ಕಛೇರಿ ಇವರನ್ನು ಸರ್ಕಾರಿ ಸೇವೆಯಿಂದ ತಕ್ಷಣವೇ ಜಾರಿಗೆ ಬರುವಂತೆ "ವಜಾಗೊಳಿಸಿ" ಆದೇಶಿಸಿದ್ದೇನೆ

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳು,
ಬೆಂಗಳೂರು.

ಪಿ.ಆರ್. 880

## ಜಲ ಸಂಪನ್ಮೂಲ ಇಲಾಖೆ
## ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ - 2000
## ಭಾಗ-1

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪ ವಿಭಾಗ, ರಾಣೇಬೆನ್ನೂರು ಮಾಹಿತಿ ಹಕ್ಕು ಅಧಿನಿಯಮ - 2000 ರ ಅಡಿಯಲ್ಲಿ ಈ ಕಛೇರಿಯಿಂದ ನೀವು ದಾಖಲಾತಿಗಳನ್ನು ಪಡೆಯಬಹುದು.

1) ದಾಖಲಾತಿಗಳನ್ನು 15 ದಿನಗಳಲ್ಲಿ ನೀಡಲಾಗುವುದು.
(ರಜಾ ದಿನಗಳನ್ನು ಹೊರತುಪಡಿಸಿ)

2) ಈ ಕಛೇರಿಯಲ್ಲಿ ಮಾಹಿತಿ ದಾಖಲಾತಿಗಳನ್ನು ನೀಡುವ ಅಧಿಕಾರಿ.

| ಕ್ರ. ಸಂ. | ಅಧಿಕಾರಿಗಳ ಹೆಸರು | ಪದನಾಮ | ನಿರ್ವಹಿಸುತ್ತಿರುವ ಉಸ್ತುವಾರಿ ಕೆಲಸಗಳು |
|---|---|---|---|
| 1. | ಶ್ರೀ ಗೋಪಾಲರಾವ್ ಪಿ.ಎಕಬೋಟೆ | ಸಹಾಯಕ ಇಂಜಿನೀಯರ್ | ಯೋಜನಾ ಶಾಖೆಯ ಕಾರ್ಯನಿರ್ವಹಣೆ. |
| 2. | ಶ್ರೀ ಪಿ.ಸಿ. ಸಬನೀಸ್ | ಪ್ರ.ದ.ಸ. | ಆಡಳಿತ ಹಾಗೂ ಲೆಕ್ಕ ಶಾಖೆಯ ಉಸ್ತುವಾರಿ |
| 3. | ಶ್ರೀ ವೀರಯ್ಯ ಕೆ.ಎಂ. | ಉಗ್ರಾಣ ಪಾಲಕರು | ಉಗ್ರಾಣ ಶಾಖೆಯ ಉಸ್ತುವಾರಿ |

**ಸಕ್ಷಮ ಪ್ರಾಧಿಕಾರ**

| ಅಧಿಕಾರಿ ಹೆಸರು | ಪದನಾಮ |
|---|---|
| ಶ್ರೀ ಜಗದೀಶ ಆರ್. ಹೆಗಡೆ | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು |

3) ಮಾಹಿತಿಯನ್ನು 15 ದಿನಗಳ ಒಳಗೆ ನೀಡದಿದ್ದ ಪಕ್ಷದಲ್ಲಿ ಮೇಲ್ಮನವಿ ಸಲ್ಲಿಸಬೇಕಾದ ಅವಧಿಯ ವಿವರಗಳು.

| ಅಧಿಕಾರಿಯ ಹೆಸರು | ಪದನಾಮ |
|---|---|
| ಶ್ರೀ ಜಿ.ಎ. ವಾಲಿ | ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಧಾರವಾಡ |

4) ಮೇಲಿನ ಅಧಿಕಾರಿಗಳು ಸಹಕರಿಸದೇ ಇದ್ದ ಪಕ್ಷದಲ್ಲಿ ದೂರನ್ನು ಈ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.

1) ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಬೆಳಗಾಂವ.

5) ಈ ಕಾಯ್ದೆಯ ಅಧಿನಿಯಮವು ಮತ್ತು ನಿಯಮಗಳ ಪಟ್ಟಿಗಳು ಸರ್ಕಾರಿ ಮುದ್ರಣಾಲಯ, ಬೆಂಗಳೂರು ಹಾಗೂ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಅಂಗೀಕೃತ ಪುಸ್ತಕ ವ್ಯಾಪಾರಿಗಳಲ್ಲಿ ಮಾರಾಟಕ್ಕೆ ದೊರೆಯುತ್ತವೆ.

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು,
ಸಣ್ಣ ನೀರಾವರಿ ಉಪ ವಿಭಾಗ, ರಾಣೇಬೆನ್ನೂರು.

## ಜಲ ಸಂಪನ್ಮೂಲ ಇಲಾಖೆ
## ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ - 2000
## ಭಾಗ-2

ಈ ಕಛೇರಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಕೈಗೊಳ್ಳಬೇಕಾದ ಅಭಿವೃದ್ಧಿ ಕಾರ್ಯಕ್ರಮಗಳ ವಿವರ.

1. ಸಣ್ಣ ನೀರಾವರಿ ಉಪ ವಿಭಾಗ, ರಾಣೇಬೆನ್ನೂರು ವ್ಯಾಪ್ತಿಯಲ್ಲಿ, ಹಾವೇರಿ, ರಾಣೇಬೆನ್ನೂರು ಹಾಗೂ ಬ್ಯಾಡಗಿ ತಾಲ್ಲೂಕುಗಳಲ್ಲಿ ಬರುತ್ತವೆ.
2. ಸಣ್ಣ ನೀರಾವರಿ ಉಪ ವಿಭಾಗ, ರಾಣೆಬೆನ್ನೂರು ಅಡಿಯಲ್ಲಿ 4 ಜನ (ಸಹಾಯಕ ಇಂಜಿನೀಯರ್) ಹಾಗೂ 3 ಜನ (ಕಿರಿಯ ಇಂಜಿನೀಯರ್) ತಾಂತ್ರಿಕ ಸಿಬ್ಬಂದಿಗಳು ಕೆಲಸ ನಿರ್ವಹಿಸುತ್ತಾರೆ.

ಅ) ಹಾವೇರಿ, ರಾಣೇಬೆನ್ನೂರು ಹಾಗೂ ಬ್ಯಾಡಗಿ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ 40 ಹೆಕ್ಟೇರ್‌ಗಿಂತ ಹೆಚ್ಚಿಗೆ ಹಾಗೂ 2000 ಹೆಕ್ಟೇರ್ ಒಳಗೆ ಇರುವ ಸಣ್ಣ ನೀರಾವರಿ ಕೆರೆಗಳು, ಬ್ಯಾರೇಜುಗಳು ಹಾಗೂ ಏತ ನೀರಾವರಿ ಯೋಜನೆಗಳ ನಿರ್ಮಾಣ ಹಾಗೂ ಉಸ್ತುವಾರಿ ಕೆಲಸಗಳು.

ಆ) ಅಸ್ತಿತ್ವದಲ್ಲಿ ಇರುವ ಕಾಮಗಾರಿಗಳ ವಾರ್ಷಿಕ ನಿರ್ವಹಣೆ ಹಾಗೂ ದುರಸ್ತಿ ಕೆರೆಗಳು.

ಇ) ಆರ್.ಐ.ಡಿ.ಎಫ್. (ನಬಾರ್ಡ್) ಯೋಜನೆಯಡಿಯಲ್ಲಿ ಕೆರೆಗಳು, ಬ್ಯಾರೇಜುಗಳು ಹಾಗೂ ಏತ ನೀರಾವರಿ ಯೋಜನೆಗಳನ್ನು ನಿರ್ಮಾಣ ಮಾಡುವುದು ಹಾಗೂ ಆಯ್ದ ಕೆರೆಗಳನ್ನು ಅಭಿವೃದ್ಧಿಪಡಿಸುವುದು.

ಈ) ಹಾವೇರಿ ಜಿಲ್ಲೆಯ ಹಾವೇರಿ, ರಾಣೇಬೆನ್ನೂರು ಹಾಗೂ ಬ್ಯಾಡಗಿ ತಾಲ್ಲೂಕುಗಳಲ್ಲಿ ಹರಿಯುವ ನದಿ, ಹಳ್ಳಗಳಿಂದ ನೀರನ್ನು ಎತ್ತಿಕೊಂಡು ನೀರಾವರಿ ಮಾಡಿಕೊಳ್ಳಲು ರೈತರಿಗೆ ನೀರಾವರಿ ಪರವಾನಿಗೆಯನ್ನು ನೀಡುವುದು.

ಉ) ಇನ್ನಿತರೆ ಸಣ್ಣ ನೀರಾವರಿ ಇಲಾಖೆಗೆ ಸಂಬಂಧಿಸಿದಂತೆ ಎಲ್ಲ ಕಾರ್ಯಗಳನ್ನು ನಿರ್ವಹಿಸುವುದು.

ಊ) ಅಸ್ತಿತ್ವದಲ್ಲಿ ಇರುವ ಕಾಮಗಾರಿಗಳ ನಿರ್ವಹಣೆ ಹಾಗೂ ದುರಸ್ತಿ.

ಎ) ಕೆರೆಗಳನ್ನು ಅಭಿವೃದ್ಧಿಪಡಿಸುವುದು.

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು,
ಪಿ.ಆರ್. 877 ಸಣ್ಣ ನೀರಾವರಿ ಉಪ ವಿಭಾಗ, ರಾಣೇಬೆನ್ನೂರು.

**ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ರವರ ನಡವಳಿಗಳು**

**ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03**

**ಕ್ರಮಾಂಕ:ಡಿಆರ್‌ಬಿ/ಸಮಾಪನೆ/28/2005-06, ದಿನಾಂಕ: 31ನೇ ಮಾರ್ಚ್ 2006**

**ವಿಷಯ:** ಸಮಾಪನೆಯಲ್ಲಿರುವ ಪೀಪಲ್ಸ್ ಬಳಕೆದಾರರ ಸಹಕಾರ ಸಂಘ ನಿಯಮಿತ, ನಂ.35, 3ನೇ ಸ್ಟೇಜ್, 2ನೇ ಬ್ಲಾಕ್, ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು-44 ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಇದೇ ಕ್ರಮಾಂಕದ ಪತ್ರ ದಿನಾಂಕ 19.11.2005ರ ನೋಟೀಸು.
2. ಈ ಕಛೇರಿಯ ಇದೇ ಕ್ರಮಾಂಕದ ಪತ್ರ ದಿನಾಂಕ 13.12.2005ರ ಆದೇಶ.
3. ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಮಾಪನಾಧಿಕಾರಿ ಪೀಪಲ್ಸ್ ಬಳಕೆದಾರರ ಸಹಕಾರ ಸಂಘ ನಿ., ಬೆಂಗಳೂರು ಇವರ ಪತ್ರ ಸಂಖ್ಯೆ:ಸಅಅ(ಬೆಂಉ):180:2005-06 ದಿನಾಂಕ 28.3.2006.

**ಪ್ರಸ್ತಾವನೆ:**

ಪೀಪಲ್ಸ್ ಬಳಕೆದಾರರ ಸಹಕಾರ ಸಂಘ ನಿಯಮಿತ, ನಂ.35, 3ನೇ ಸ್ಟೇಜ್, 2ನೇ ಬ್ಲಾಕ್, ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು-44 ಈ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೇ ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುವುದಾಗಿ ಈ ಕಛೇರಿಯ ಗಮನಕ್ಕೆ ತರಲಾಗಿದ್ದು, ಈ ಹಿನ್ನಲೆಯಲ್ಲಿ ಸದರಿ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಮನಗಂಡು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರು ಅವರ ದಿನಾಂಕ: 22-12-2004 ರ ಪ್ರಕಟಣೆಯ ರೀತ್ಯಾ ಮೇಲ್ಕಂಡ ಸಂಘದ ಹೆಸರನ್ನು ದಿನಾಂಕ: 2-8-2005 ರ "ಸಂಜೆವಾಣಿ" ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಿಸಿ, ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಸಂಘದ ಸದಸ್ಯರಾಗಲೀ ಆಡಳಿತ ಮಂಡಳಿಯ ಸದಸ್ಯರಾಗಲೀ ಅಥವಾ ಸಾರ್ವಜನಿಕರಾಗಲೀ ಹಣಕಾಸು ಸಂಸ್ಥೆಗಳಾಗಲೀ ಏನಾದರೂ ಆಕ್ಷೇಪಣೆಗಳಿದ್ದಲ್ಲಿ, ಈ ಪತ್ರಿಕಾ ಪ್ರಕಟಣೆ ಹೊರಡಿಸಿದ 15 ದಿನಗಳ ಒಳಗಾಗಿ ಆಕ್ಷೇಪಣೆಯನ್ನು ಸಮರ್ಥಿಸುವ ದಾಖಲಾತಿಗಳೊಂದಿಗೆ ಸಲ್ಲಿಸುವಂತೆ ಸೂಚನೆ ನೀಡಲಾಗಿತ್ತು. ತದನಂತರ ಮೇಲ್ಕಂಡ ಸಹಕಾರ ಸಂಘದ ಅಧ್ಯಕ್ಷರು/ ಕಾರ್ಯದರ್ಶಿಯವರಿಗೆ ಈ ಕಛೇರಿಯಿಂದ ನೀಡಲಾಗಿರುವ ಉಲ್ಲೇಖ (1) ರಲ್ಲಿ ಕಾಣಿಸಿರುವ ದಿನಾಂಕ: 19-11-2005 ರ ನೋಟೀಸಿನಲ್ಲಿ ಸದರಿ ಸಹಕಾರ ಸಂಘವನ್ನು 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72 ರನ್ವಯ ಸಮಾಪನೆಗೊಳಿಸಿ ಸಂಘದ ನೊಂದಣಿಯನ್ನು ಏಕೆ ರದ್ದುಪಡಿಸಬಾರದು ಎಂಬ ಬಗ್ಗೆ ಅವರ ವಿವರಣೆ ಏನಾದರೂ ಇದ್ದಲ್ಲಿ ಸದರಿ ನೋಟೀಸು ತಲುಪಿದ ಏಳು (7) ದಿನಗಳೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು. ಆದರೆ ಸದರಿ ನೋಟೀಸು ಸ್ವೀಕೃತಗೊಳ್ಳದೇ ಅಂಚೆ ಇಲಾಖೆಯಿಂದ ಹಿಂದಿರುಗಿಸಲ್ಪಟ್ಟಿರುವುದರಿಂದ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರ ರೀತ್ಯಾ ಹೊರಡಿಸಿರುವ ಉಲ್ಲೇಖ (2) ರಲ್ಲಿ ಕಾಣಿಸಿರುವ ದಿನಾಂಕ: 13.12.2005ರ ಆದೇಶದನ್ವಯ ಮೇಲ್ಕಂಡ ಸಹಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿದ್ದು, ಸದರಿ ಕಾಯ್ದೆಯ ಕಲಂ 73 ರನ್ವಯ ಸಹಕಾರಿ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಕ ಮಾಡಲಾಗಿತ್ತು.

ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಂಘದ ಸಮಾಪನಾಧಿಕಾರಿಯವರು ಉಲ್ಲೇಖ (3) ರಲ್ಲಿ ಕಾಣಿಸಿರುವ ಅವರ ದಿನಾಂಕ:28-3-2006 ರ ಪತ್ರದಲ್ಲಿ ದಿನಾಂಕ:28-1-2006 ರಂದು ಮೇಲ್ಕಂಡ ಸಹಕಾರ ಸಂಘದ ಸಮಾಪನಾಧಿಕಾರಿಯ ಪ್ರಭಾರವನ್ನು ವಹಿಸಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಅವರು ಮುಂದುವರಿದು, ಸಂಘದಲ್ಲಿರುವ ಲೆಕ್ಕ ಪುಸ್ತಕಗಳನ್ನು ಪರಿಶೀಲಿಸಲಾಗಿ ಸಂಘದ ಲೆಕ್ಕ-ಪುಸ್ತಕಗಳು 2002-03ನೇ ಸಾಲಿನವರೆಗೆ ಲೆಕ್ಕಪರಿಶೋಧನೆಯಾಗಿದ್ದು, ಸಂಘವು ಪ್ರತಿವರ್ಷ ವಾರ್ಷಿಕ ಸರ್ವಸದಸ್ಯರ ಮಹಾಸಭೆಯನ್ನು ನಡೆಸಿದ್ದು ಸಭೆಯ ನಡವಳಿಕೆಯನ್ನು ಸಕಾಲದಲ್ಲಿ ಇಲಾಖೆಗೆ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಸಂಘದ ಹಿಂದಿನ ಆಡಳಿತ ಮಂಡಳಿಯು ಆಗಿಂದಾಗ್ಗೆ ಆಡಳಿತ ಮಂಡಳಿ ಸಭೆಯನ್ನು ನಡೆಸಿದ್ದು, ತಹಲ್‌ವರೆವಿಗೂ ಸಭೆಯ ನಡವಳಿಗಳನ್ನು ದಾಖಲಿಸಿರುವುದಾಗಿ ಅವರು ತಿಳಿಸಿರುತ್ತಾರೆ. ಈ ಸಹಕಾರ ಸಂಘವು ಹಾಲಿ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಲ್ಲಿ ಪಡಿತರ ವ್ಯಾಪಾರ ವಹಿವಾಟನ್ನು ನಿರ್ವಹಿಸಿಕೊಂಡು ಬಂದಿದ್ದು, ಹಾಲಿ ಕಾರ್ಯ-ಚಟುವಟಿಕೆ ನಡೆಸುತ್ತಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಿರುವುದನ್ನು ರದ್ದುಗೊಳಿಸಿ ಸಂಘವನ್ನು ಕೆಲವು ಷರತ್ತಿಗೆ ಒಳಪಟ್ಟು ಪುನಃಶ್ಚೇತನಗೊಳಿಸುವಂತೆ ಹಾಗೂ ಸಂಘವನ್ನು ಕಾರ್ಯನಿರತ ಸಹಕಾರ ಸಂಘಗಳ ಪಟ್ಟಿಗೆ ಸೇರಿಸುವಂತೆ ಅವರು ಕೋರಿರುತ್ತಾರೆ. ಸಂಘದ ಹಾಲಿ ಇರುವ ಆಡಳಿತ ಮಂಡಳಿಯು 2004-05 ರಿಂದ 2008-09ರ 5 ವರ್ಷಗಳ ಅವಧಿಗೆ ದಿನಾಂಕ:2-8-2004ರಂದು ಆಯ್ಕೆಯಾಗಿದ್ದು, ಈ ಹಿನ್ನೆಲೆಯಲ್ಲಿ ಸದರಿ ಆಡಳಿತ ಮಂಡಳಿಯನ್ನೇ ಮುಂದುವರಿಸುವಂತೆ ಅವರು ಕೋರಿರುತ್ತಾರೆ.

ಸಂಘದ ಸಮಾಪನಾಧಿಕಾರಿಯವರ ಪ್ರಸ್ತಾವವನ್ನು ಪರಿಶೀಲಿಸಿದೆ. ಅವರು ಒದಗಿಸಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ಮೇಲ್ಕಂಡ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುತ್ತಿರುವುದು ಕಂಡುಬಂದಿದ್ದು, ಈ ಹಿನ್ನೆಲೆಯಲ್ಲಿ ಕೆಲವು ಷರತ್ತುಗಳಿಗೆ ಒಳಪಟ್ಟು ಸಂಘವನ್ನು ಸಮಾಪನೆಗೊಳಿಸಿರುವುದನ್ನು ರದ್ದುಪಡಿಸಿ, ಸಂಘವನ್ನು ಪುನಃಶ್ಚೇತನಗೊಳಿಸಲು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72 (3) ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯು/69/ಸಿಎಲ್‌ಎಂ/2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ. ಆದ ನಾನು ಪೀಪಲ್ಸ್ ಬಳಕೆದಾರರ ಸಹಕಾರ ಸಂಘ ನಿಯಮಿತ, ನಂ.35, 3ನೇ ಸ್ಟೇಜ್, 2ನೇ ಬ್ಲಾಕ್, ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು-44 ಈ ಸಹಕಾರ ಸಂಘವನ್ನು ಕಲಂ 72(2) ರನ್ವಯ ಹೊರಡಿಸಿರುವ ಈ ಕಛೇರಿಯ ಇದೇ ಕ್ರಮಾಂಕದ ದಿನಾಂಕ: 13.12.2005 ರ ಆದೇಶದ ರೀತ್ಯಾ ಸಮಾಪನೆಗೊಳಿಸಿರುವುದನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಈ ಮೂಲಕ ಆದೇಶಿಸಿರುತ್ತೇನೆ ಹಾಗೂ ಸದರಿ ಸಹಕಾರ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಪುನಃಶ್ಚೇತನಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಸಂಘದ ಈ ಹಿಂದಿನ ಆಡಳಿತ ಮಂಡಳಿಯು 2004-05 ರಿಂದ 2008-09ನೇ ಸಾಲುಗಳ ಅವಧಿಗೆ ಆಯ್ಕೆಯಾಗಿರುವುದರಿಂದ, ಈ ಆಡಳಿತ ಮಂಡಳಿ ಹಾಗೂ ಪದಾಧಿಕಾರಿಗಳು ಅವರ ಅವಧಿ ಮುಗಿಯುವವರೆಗೆ ಮುಂದುವರಿಯತಕ್ಕದ್ದು ಎಂದೂ ಈ ಮೂಲಕ ಆದೇಶಿಸಲಾಗಿದೆ.

**ಷರತ್ತುಗಳು**

1. ಸಂಘದ ದುಡಿಯುವ ಬಂಡವಾಳವನ್ನು ಷೇರು ಧನ ಸಂಗ್ರಹಿಸುವುದರ ಮೂಲಕ ಹೆಚ್ಚಿಸಿಕೊಳ್ಳುವುದು.
2. ಸಂಘದ ಸದಸ್ಯರುಗಳ ಹಿತಕ್ಕಾಗಿ ವಿಶೇಷವಾದ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಂಡು ಸಂಘವನ್ನು ಆರ್ಥಿಕವಾಗಿ ಸದೃಢಗೊಳಿಸುವುದು.
3. ಸಂಘದ ಉಪ ನಿಯಮಗಳಲ್ಲಿರುವ ಉದ್ದೇಶಗಳಿಗನುಗುಣವಾಗಿ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುವುದು.
4. ಕರ್ನಾಟಕ ಸಹಕಾರ ಸಂಘಗಳ ನಿಯಮ 17 ರಂತೆ ಸಂಘದ ಸಿಬ್ಬಂದಿಯ ವೃಂದಬಲ ಮತ್ತು ವೇತನ ಶ್ರೇಣಿಗಳನ್ನು ಇಲಾಖೆಯಿಂದ ಅನುಮೋದನೆ ಪಡೆಯುವುದು.
5. ಲೆಕ್ಕ ಪರಿಶೋಧನಾ ಇಲಾಖೆಗೆ ಪತ್ರ ಬರೆದು 2003-04ನೇ ಸಾಲಿನಿಂದ ಲೆಕ್ಕಪುಸ್ತಕಗಳನ್ನು ಪರಿಶೋಧನೆ ಮಾಡಿಸಲು ಕ್ರಮವಿಡುವುದು.
6. ಸಂಘದ ನಿವ್ವಳ ನಷ್ಟವನ್ನು ಕಡಿಮೆ ಮಾಡಲು ಸಂಘದ ಖರ್ಚು-ವೆಚ್ಚಗಳನ್ನು ಕಡಿತಗೊಳಿಸುವುದು.
7. ಸರ್ಕಾರಕ್ಕೆ ಪಾವತಿಸಬೇಕಾಗಿರುವ ಹರಿಜನ/ಗಿರಿಜನ ಷೇರು ಬಂಡವಾಳವನ್ನು ಷರತ್ತು ಮತ್ತು ನಿಬಂಧನೆಗಳನ್ವಯ ಪಾವತಿಸಲು ಕ್ರಮವಿಡುವುದು.
8. ಸರ್ಕಾರಕ್ಕೆ ಪಾವತಿಸಬೇಕಾಗಿರುವ ಷೇರು ಬಂಡವಾಳವನ್ನು ಷರತ್ತು ಮತ್ತು ನಿಬಂಧನೆಗಳನ್ವಯ ಪಾವತಿಸುವುದು.
9. ಬೆಂಗಳೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿಗೆ ಬಾಕಿಯಿರುವ ದಿನಾಂಕ:31.3.2003ರ ಅಂತ್ಯಕ್ಕಿರುವ ನಗದು ಸಾಲ ರೂ. 72,134-40 ಮತ್ತು ಅದರ ಮೇಲಿನ ಬಡ್ಡಿ ರೂ. 1,29,600-00 ಹಾಗೂ ಮುಂದಿನ ಅವಧಿಯ ಬಡ್ಡಿಯನ್ನು ಸಕಾಲದಲ್ಲಿ ಪಾವತಿಸಿ ನಷ್ಟವನ್ನು ಕಡಿಮೆ ಮಾಡಲು ಕ್ರಮವಿಡುವುದು.
10. ಸರ್ಕಾರದ ಪೀಠೋಪಕರಣ ಸಾಲ ಸಹಾಯಧನ ಮತ್ತು ಬಂಡವಾಳ ಸಾಲ ಸಹಾಯಧನವನ್ನು ಷರತ್ತು ಮತ್ತು ನಿಬಂಧನೆಗಳನ್ವಯ ಪಾವತಿಸಲು ಕ್ರಮವಿಡುವುದು.
11. ಸರ್ಕಾರಕ್ಕೆ ಬಾಕಿಯಿರುವ ಲೆಕ್ಕ-ಪರಿಶೋಧನಾ ಶುಲ್ಕವನ್ನು ಸಂಬಂಧಿಸಿದ ಖಾತೆಗೆ ಪಾವತಿಸುವುದು.
12. ಆಪದ್ಧನ ನಿಧಿ ಹಾಗೂ ಇತರೆ ನಿಧಿಗಳ ಮೊತ್ತವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ರೀತ್ಯಾ ಹೂಡಿಕೆಯಲ್ಲಿ ತೊಡಗಿಸುವುದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:31.3.2006 ರಂದು ನೀಡಿರುತ್ತೇನೆ.

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಉಪನಿಬಂಧಕರು-1,
ಬೆಂಗಳೂರು ನಗರ ಜಿಲ್ಲೆ,

ಪಿ.ಆರ್. 834

**ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ರವರ ನಡವಳಿಗಳು**
**ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03**
**ಕ್ರಮಾಂಕ:ಡಿಆರ್‌ಬಿ/ಸಮಾಪನೆ/22/2005-06, ದಿನಾಂಕ: 31ನೇ ಮಾರ್ಚ್ 2006**

**ವಿಷಯ:** ಸಮಾಪನೆಯಲ್ಲಿರುವ ಬಸವೇಶ್ವರ ಬಳಕೆದಾರರ ಸಹಕಾರ ಸಂಘ ನಿಯಮಿತ, ಸರ್ವೆ ನಂ.46, ನಂ.899, ಸಣ್ಣಕ್ಕಿ ಬಯಲು, ಕಮಲಾನಗರ 2ನೇ ಹಂತ, ಕಾಮಾಕ್ಷಿಪಾಳ್ಯ, ಬೆಂಗಳೂರು-79 ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಇದೇ ಕ್ರಮಾಂಕದ ಪತ್ರ ದಿನಾಂಕ 19.11.2005ರ ನೋಟೀಸು
2. ಈ ಕಛೇರಿಯ ಇದೇ ಕ್ರಮಾಂಕದ ಪತ್ರ ದಿನಾಂಕ 13.12.2005ರ ಆದೇಶ.
3. ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಮಾಪನಾಧಿಕಾರಿ ಬಸವೇಶ್ವರ ಬಳಕೆದಾರರ ಸಹಕಾರ ಸಂಘ ನಿ., ಬೆಂಗಳೂರು ಇವರ ಪತ್ರ ಸಂಖ್ಯೆ:ಸಅಅ(ಬೆಂಉ):179:2005-06 ದಿನಾಂಕ 29.3.2006.

**ಪ್ರಸ್ತಾವನೆ:**

ಬಸವೇಶ್ವರ ಬಳಕೆದಾರರ ಸಹಕಾರ ಸಂಘ ನಿಯಮಿತ, ನಂ.46, ನಂ.899, ಸಣ್ಣಕ್ಕಿ ಬಯಲು ಕಮಲಾನಗರ 2ನೇ ಹಂತ, ಕಾಮಾಕ್ಷಿಪಾಳ್ಯ, ಬೆಂಗಳೂರು-79 ಈ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೇ ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುವುದಾಗಿ ಈ ಕಛೇರಿಯ ಗಮನಕ್ಕೆ ತರಲಾಗಿದ್ದು, ಈ ಹಿನ್ನಲೆಯಲ್ಲಿ ಸದರಿ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಮನಗಂಡು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರು ಅವರ ದಿನಾಂಕ: 22-12-2004 ರ ಪ್ರಕಟಣೆಯ ರೀತ್ಯಾ ಮೇಲ್ಕಂಡ ಸಂಘದ ಹೆಸರನ್ನು ದಿನಾಂಕ: 2-3-2005 ರ "ಸಂಜೆವಾಣಿ" ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಿಸಿ, ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಸಂಘದ ಸದಸ್ಯರಾಗಲೀ ಆಡಳಿತ ಮಂಡಳಿಯ ಸದಸ್ಯರಾಗಲೀ ಅಥವಾ ಸಾರ್ವಜನಿಕರಾಗಲೀ ಹಣಕಾಸು ಸಂಸ್ಥೆಗಳಾಗಲೀ ಏನಾದರೂ ಆಕ್ಷೇಪಣೆಗಳಿದ್ದಲ್ಲಿ, ಈ ಪತ್ರಿಕಾ ಪ್ರಕಟಣೆ ಹೊರಡಿಸಿದ 15 ದಿನಗಳ ಒಳಗಾಗಿ ಆಕ್ಷೇಪಣೆಯನ್ನು ಸಮರ್ಥಿಸುವ ದಾಖಲಾತಿಗಳೊಂದಿಗೆ ಸಲ್ಲಿಸುವಂತೆ ಸೂಚನೆ ನೀಡಲಾಗಿತ್ತು. ತದನಂತರ ಮೇಲ್ಕಂಡ ಸಹಕಾರ ಸಂಘದ ಅಧ್ಯಕ್ಷರು/ ಕಾರ್ಯದರ್ಶಿಯವರಿಗೆ ಈ ಕಛೇರಿಯಿಂದ ನೀಡಲಾಗಿರುವ ಉಲ್ಲೇಖ (1) ರಲ್ಲಿ ಕಾಣಿಸಿರುವ ದಿನಾಂಕ: 19-11-2005 ರ ನೋಟೀಸಿನಲ್ಲಿ ಸದರಿ ಸಹಕಾರ ಸಂಘವನ್ನು 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72 ರನ್ವಯ ಸಮಾಪನೆಗೊಳಿಸಿ ಸಂಘದ ನೊಂದಣಿಯನ್ನು ಏಕೆ ರದ್ದುಪಡಿಸಬಾರದು ಎಂಬ ಬಗ್ಗೆ ಅವರ ವಿವರಣೆ ಏನಾದರೂ ಇದ್ದಲ್ಲಿ ಸದರಿ ನೋಟೀಸು ತಲುಪಿದ ಏಳು (7) ದಿನಗಳೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು. ಆದರೆ ಸದರಿ ನೋಟೀಸು ಸ್ವೀಕೃತಗೊಳ್ಳದೇ ಅಂಚೆ ಇಲಾಖೆಯಿಂದ ಹಿಂದಿರುಗಿಸಲ್ಪಟ್ಟಿರುವುದರಿಂದ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರ ರೀತ್ಯಾ ಹೊರಡಿಸಿರುವ ಉಲ್ಲೇಖ (2) ರಲ್ಲಿ ಕಾಣಿಸಿರುವ ದಿನಾಂಕ: 13.12.2005ರ ಆದೇಶದನ್ವಯ ಮೇಲ್ಕಂಡ ಸಹಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿದ್ದು, ಸದರಿ ಕಾಯ್ದೆಯ ಕಲಂ 73 ರನ್ವಯ ಸಹಕಾರಿ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಕ ಮಾಡಲಾಗಿತ್ತು.

ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಂಘದ ಸಮಾಪನಾಧಿಕಾರಿಯವರು ಉಲ್ಲೇಖ (3) ರಲ್ಲಿ ಕಾಣಿಸಿರುವ ಅವರ ದಿನಾಂಕ:29-3-2006 ರ ಪತ್ರದಲ್ಲಿ ದಿನಾಂಕ:25-01-02-2006 ರಂದು ಮೇಲ್ಕಂಡ ಸಹಕಾರ ಸಂಘದ ಸಮಾಪನಾಧಿಕಾರಿಯ ಪ್ರಭಾರವನ್ನು ವಹಿಸಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಅವರು ಮುಂದುವರಿದು, ಸಂಘದಲ್ಲಿರುವ ಲೆಕ್ಕ ಪುಸ್ತಕಗಳನ್ನು ಪರಿಶೀಲಿಸಲಾಗಿ ಸಂಘದ ಲೆಕ್ಕ-ಪುಸ್ತಕಗಳು 2003-04ನೇ ಸಾಲಿನವರೆಗೆ ಲೆಕ್ಕಪರಿಶೋಧನೆಯಾಗಿದ್ದು, ಸಂಘವು ಪ್ರತಿವರ್ಷ ವಾರ್ಷಿಕ ಸರ್ವಸದಸ್ಯರ ಮಹಾಸಭೆಯನ್ನು ನಡೆಸಿರುವುದಾಗಿ ತಿಳಿಸಿರುತ್ತಾರೆ. ಸಂಘದ ಹಿಂದಿನ ಆಡಳಿತ ಮಂಡಳಿಯು ಆಗಿಂದಾಗ್ಗೆ ಆಡಳಿತ ಮಂಡಳಿ ಸಭೆಯನ್ನು ನಡೆಸಿದ್ದು, ತಹಲ್‌ವರೆವಿಗೂ ಸಭೆಯ ನಡವಳಿಗಳನ್ನು ದಾಖಲಿಸಿರುವುದಾಗಿ ಅವರು ತಿಳಿಸಿರುತ್ತಾರೆ. ಈ ಸಹಕಾರ ಸಂಘವು ಹಾಲಿ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಲ್ಲಿ ಪಡಿತರ ವ್ಯಾಪಾರ ವಹಿವಾಟನ್ನು ಅಕ್ಟೋಬರ್-2005 ರಿಂದ ನಿರ್ವಹಿಸಿಕೊಂಡು ಬಂದಿದ್ದು, ಹಾಲಿ ಕಾರ್ಯ-ಚಟುವಟಿಕೆ ನಡೆಸುತ್ತಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಿರುವುದನ್ನು ರದ್ದುಗೊಳಿಸಿ ಸಂಘವನ್ನು ಕೆಲವು ಷರತ್ತಿಗೆ ಒಳಪಟ್ಟು ಪುನಃಶ್ಚೇತನಗೊಳಿಸುವಂತೆ ಹಾಗೂ ಸಂಘವನ್ನು ಕಾರ್ಯನಿರತ ಸಹಕಾರ ಸಂಘಗಳ ಪಟ್ಟಿಗೆ ಸೇರಿಸುವಂತೆ ಅವರು ಕೋರಿರುತ್ತಾರೆ. ಸಂಘದ ಹಾಲಿ ಇರುವ ಆಡಳಿತ ಮಂಡಳಿಯು 2005-06 ರಿಂದ 2009-2010ರ 5 ವರ್ಷಗಳ ಅವಧಿಗೆ ದಿನಾಂಕ:24-9-2005ರಂದು ಆಯ್ಕೆಯಾಗಿದ್ದು, ಈ ಹಿನ್ನೆಲೆಯಲ್ಲಿ ಸದರಿ ಆಡಳಿತ ಮಂಡಳಿಯನ್ನೇ ಮುಂದುವರಿಸುವಂತೆ ಅವರು ಕೋರಿರುತ್ತಾರೆ.

ಸಂಘದ ಸಮಾಪನಾಧಿಕಾರಿಯವರ ಪ್ರಸ್ತಾವವನ್ನು ಪರಿಶೀಲಿಸಿದೆ. ಅವರು ಒದಗಿಸಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ಮೇಲ್ಕಂಡ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುತ್ತಿರುವುದು ಕಂಡುಬಂದಿದ್ದು, ಈ ಹಿನ್ನೆಲೆಯಲ್ಲಿ ಕೆಲವು ಷರತ್ತುಗಳಿಗೆ ಒಳಪಟ್ಟು ಸಂಘವನ್ನು ಸಮಾಪನೆಗೊಳಿಸಿರುವುದನ್ನು ರದ್ದುಪಡಿಸಿ, ಸಂಘವನ್ನು ಪುನಃಶ್ಚೇತನಗೊಳಿಸಲು ತೀರ್ಮಾನಿಸಿದೆ.

ಆದರಂತೆ ಈ ಕೆಳಕಂಡ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72 (3) ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯು/69/ಸಿಎಲ್‌ಎಂ/2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ. ಆದ ನಾನು ಬಸವೇಶ್ವರ ಬಳಕೆದಾರರ ಸಹಕಾರ ಸಂಘ ನಿಯಮಿತ, ಸರ್ವೆ ನಂ.46, ನಂ.899, ಸಣ್ಣಕ್ಕಿ ಬಯಲು, ಕಮಲಾನಗರ 2ನೇ ಹಂತ, ಕಾಮಾಕ್ಷಿಪಾಳ್ಯ, ಬೆಂಗಳೂರು-79 ಈ ಸಹಕಾರ ಸಂಘವನ್ನು ಕಲಂ 72(2) ರನ್ವಯ ಹೊರಡಿಸಿರುವ ಈ ಕಛೇರಿಯ ಇದೇ ಕ್ರಮಾಂಕದ ದಿನಾಂಕ: 13.12.2005 ರ ಆದೇಶದ ರೀತ್ಯಾ ಸಮಾಪನೆಗೊಳಿಸಿರುವುದನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಈ ಮೂಲಕ ಆದೇಶಿಸಿರುತ್ತೇನೆ ಹಾಗೂ ಸದರಿ ಸಹಕಾರ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಪುನಃಶ್ಚೇತನಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಸಂಘದ ಈ ಹಿಂದಿನ ಆಡಳಿತ ಮಂಡಳಿಯು 2005-06 ರಿಂದ 2009-2010ನೇ ಸಾಲುಗಳ ಅವಧಿಗೆ ಆಯ್ಕೆಯಾಗಿರುವುದರಿಂದ, ಈ ಆಡಳಿತ ಮಂಡಳಿ ಹಾಗೂ ಪದಾಧಿಕಾರಿಗಳು ಅವರ ಅವಧಿ ಮುಗಿಯುವವರೆಗೆ ಮುಂದುವರಿಯತಕ್ಕದ್ದು ಎಂದೂ ಈ ಮೂಲಕ ಆದೇಶಿಸಲಾಗಿದೆ.

**ಷರತ್ತುಗಳು**

1. ಸಂಘದ ದುಡಿಯುವ ಬಂಡವಾಳವನ್ನು ಷೇರು ಧನ ಸಂಗ್ರಹಿಸುವುದರ ಮೂಲಕ ಹೆಚ್ಚಿಸಿಕೊಳ್ಳುವುದು.
2. ಸಂಘದ ಸದಸ್ಯರುಗಳ ಹಿತಕ್ಕಾಗಿ ವಿಶೇಷವಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂಘವನ್ನು ಆರ್ಥಿಕವಾಗಿ ಸದೃಢಗೊಳಿಸುವುದು.
3. ಸಂಘದ ಉಪ ನಿಯಮಗಳಲ್ಲಿರುವ ಉದ್ದೇಶಗಳಿಗನುಗುಣವಾಗಿ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುವುದು.
4. ಕರ್ನಾಟಕ ಸಹಕಾರ ಸಂಘಗಳ ನಿಯಮ 17 ರಂತೆ ಸಂಘದ ಸಿಬ್ಬಂದಿಯ ವೃಂದಬಲ ಮತ್ತು ವೇತನ ಶ್ರೇಣಿಗಳನ್ನು ಇಲಾಖೆಯಿಂದ ಅನುಮೋದನೆ ಪಡೆಯುವುದು.
5. ಲೆಕ್ಕ ಪರಿಶೋಧನಾ ಇಲಾಖೆಗೆ ಪತ್ರ ಬರೆದು 2004-05ನೇ ಸಾಲಿನ ಲೆಕ್ಕಪುಸ್ತಕಗಳನ್ನು ಪರಿಶೋಧನೆ ಮಾಡಿಸಲು ಕ್ರಮವಿಡುವುದು.
6. ಸಂಘದ ನಿವ್ವಳ ನಷ್ಟವನ್ನು ಕಡಿಮೆ ಮಾಡಲು ಸಂಘದ ಖರ್ಚು-ವೆಚ್ಚಗಳನ್ನು ಕಡಿತಗೊಳಿಸುವುದು.
7. ಸರ್ಕಾರಕ್ಕೆ ಬಾಕಿ ಇರುವ ಲೆಕ್ಕ ಪರಿಶೋಧನಾ ಶುಲ್ಕವನ್ನು ಕೂಡಲೇ ಪಾವತಿಸುವುದು.
8. ಸರ್ಕಾರದ ಸಾಲ ಮತ್ತು ಬಡ್ಡಿಯನ್ನು ಕೂಡಲೇ ಷರತ್ತು ಮತ್ತು ನಿಬಂಧನೆಗಳನ್ವಯ ಪಾವತಿಸುವುದು.
9. ಬೆಂಗಳೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿಗೆ ಬಾಕಿಯಿರುವ ಸಾಲ ಮತ್ತು ಅದರ ಮೇಲಿನ ಬಡ್ಡಿಯನ್ನು ಕೂಡಲೇ ಪಾವತಿಸುವುದು (ಪುನಃಶ್ಚೇತನ ಪ್ರತಿಯನ್ನು ಬ್ಯಾಂಕಿಗೆ ಕಳುಹಿಸುವುದು.)
10. ಸಂಘದ ಲೆಕ್ಕ-ಪುಸ್ತಕಗಳನ್ನು ನಿರ್ವಹಿಸುವಲ್ಲಿ ಸುಧಾರಣೆ ಅಗತ್ಯ.
11. ಸಂಘವು ಸಹಕಾರ ಸಂಘಗಳ ಕಾಯ್ದೆಯ ಕಲಂ 29 ಜಿ(6) ಯ ರೀತ್ಯಾ ನಿಗದಿಪಡಿಸಿರುವ ಮಾಹಿತಿಗಳನ್ನು ತಪ್ಪದೇ ಈ ಕಛೇರಿಗೆ ಸಲ್ಲಿಸತಕ್ಕದ್ದು.
12. ಸಂಘವು ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಾವಳಿಗಳ ಅವಕಾಶಗಳ ರೀತ್ಯಾ ನಿಗದಿತ ಅವಧಿಯ ಒಳಗೆ ಸಂಘದ ಸರ್ವಸದಸ್ಯರ ಸಭೆ ಹಾಗೂ ಆಡಳಿತ ಮಂಡಳಿ ಸಭೆ ಮತ್ತು ಪದಾಧಿಕಾರಿಗಳ ಚುನಾವಣೆಯನ್ನು ನಡೆಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:31.3.2006 ರಂದು ನೀಡಿರುತ್ತೇನೆ.

**ಬಿ.ಸಿ. ಸತೀಶ್**

ಪಿ.ಆರ್. 835

ಸಹಕಾರ ಸಂಘಗಳ ಉಪನಿಬಂಧಕರು-1,

ಬೆಂಗಳೂರು ನಗರ ಜಿಲ್ಲೆ,

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯ ನಡವಳಿಗಳು, ಬೆಂಗಳೂರು

**ವಿಷಯ:** ಶ್ರೀ ಎಂ.ಎಂ. ಸತ್ತಿಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಜೆಎಂಎಫ್‌ಸಿ ನ್ಯಾಯಾಲಯ, ಕೆ.ಜಿ.ಎಫ್. ಇವರನ್ನು ವಿಚಾರಣೆ ಬಾಕಿಯಿರಿಸಿ ಸೇವೆಯಿಂದ ಅಮಾನತ್ತಿನಲ್ಲಿಡುವ ಕುರಿತು.

**ಉಲ್ಲೇಖ:** 1. ಅಭಿಯೋಗ ಉಪನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ:ಅಉನಿ:ಬೆಂನಿ:ಸಿಶಾ: 29:2006-07 ದಿನಾಂಕ:28.4.06.

2. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರು ಸರ್ಕಾರಕ್ಕೆ ವಿಳಾಸಿಸಿ ಕಳುಹಿಸಿರುವ ಪತ್ರ ಸಂಖ್ಯೆ:ಲೋ:ತನಿಖೆ(ಸಾ)ಡಿಡಿ:13:ಸಿಆರ್:5:06:ಕೆಎಲ್‌ಆರ್: ದಿನಾಂಕ:26.4.2006ರ ಪತ್ರದ ಪ್ರತಿಯನ್ನು ಈ ಕಛೇರಿಗೆ ಕಳುಹಿಸಿರುತ್ತಾರೆ.

**ಪ್ರಸ್ತಾವನೆ:**

ಅಭಿಯೋಗ ಉಪನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರು ಈ ಕಛೇರಿಗೆ ಕಳುಹಿಸಿರುವ ಉಲ್ಲೇಖ (1)ರ ಪತ್ರದಲ್ಲಿ ಶ್ರೀ ಎಂ.ಎಂ. ಸತ್ತಿಗೇರಿ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೆ.ಜಿ.ಎಫ್. ಇವರು ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಬಂಗಾರಪೇಟೆ ಹುದ್ದೆಯ ಹೆಚ್ಚುವರಿ ಪ್ರಭಾರವನ್ನು ನಿರ್ವಹಿಸುತ್ತಿದ್ದು ಅವರ ಮೇಲೆ ದಿನಾಂಕ: 24.4.2006 ರಂದು ಲೋಕಾಯುಕ್ತ ಪೊಲೀಸರು ಲಂಚ ನಿರೋಧ ಕಾಯ್ದೆ 1988ರ ಕಲಂ 7,13(1) (ಡಿ) ರೆ.ವಿ. 13(2) ರ ಅಡಿಯಲ್ಲಿ ಮೊಕದ್ದಮೆ ಸಂಖ್ಯೆ: 5:06 ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ನಡೆಸುತ್ತಿರುವ ಬಗ್ಗೆ ಸರ್ಕಾರಿ ಅಭಿಯೋಜಕರು ಅವರು ಸಲ್ಲಿಸಿರುವ ದಿನಾಂಕ: 26.4.2006ರ ವರದಿಯನ್ನು ಅಡಕಗಳೊಂದಿಗೆ ಈ ಕಛೇರಿಗೆ ಕಳುಹಿಸಿರುತ್ತಾರೆ. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರು ಈ ಕಛೇರಿಗೆ ಕಳುಹಿಸಿರುವ ಉಲ್ಲೇಖ (2)ರ ಪತ್ರದಲ್ಲಿ ಸದರಿ ಅಂಶವನ್ನು ಸರ್ಕಾರಕ್ಕೆ ಸಲ್ಲಿಸಿ ಸದರಿ ಅಧಿಕಾರಿಯವರು ಮಾನ್ಯ ಜೆಎಂಎಫ್‌ಸಿ ನ್ಯಾಯಾಲಯ ಬಂಗಾರಪೇಟೆ ಸಿಸಿ ಸಂಖ್ಯೆ:428:04ರ ಪ್ರಕರಣವು ವಿಚಾರಣೆ ನಡೆದು ಬಿಡುಗಡೆಯಾಗಿದ್ದು ಸದರಿ ನ್ಯಾಯಾಲಯದ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸಲು ಸದರಿ ಪ್ರಕರಣ ಪಿರ್ಯಾದುದಾರರಾದ ಶ್ರೀ ಎಂ.ಎನ್. ಸುರೇಶ್ ಕುಮಾರ್ ಅವರಿಂದ ರೂ. 5000 ಲಂಚ ಕೇಳಿದ್ದು ನಂತರ ರೂ. 4500 ಗಳನ್ನು ಕೊಡಬೇಕೆಂದು ಲಂಚದ ಹಣಕ್ಕಾಗಿ ಒತ್ತಾಯಿಸಿದ್ದರಿಂದ ಸದರಿ ಪಿರ್ಯಾದುದಾರರು ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಕೋಲಾರದಲ್ಲಿ ಈ ಕುರಿತು ದೂರು ನೀಡಿದ್ದು ಸದರಿ ದೂರಿನ ಅನ್ವಯ ಪೊಲೀಸ್ ಇನ್ಸ್‌ಪೆಕ್ಟರ್ ಕರ್ನಾಟಕ ಲೋಕಾಯುಕ್ತ, ಕೋಲಾರ ಅವರು ದಿನಾಂಕ:24.4.2006 ರಂದು ಸದರಿ ಅಧಿಕಾರಿಯವರ ವಿರುದ್ಧ, ಸಹಾಯಕ ಸರ್ಕಾರಿ ಅಭಿಯೋಜಕರು ಜೆಎಂಎಫ್‌ಸಿ ನ್ಯಾಯಾಲಯ, ಬಂಗಾರಪೇಟೆ ಕಛೇರಿಯಲ್ಲಿ ಏರ್ಪಡಿಸಿದ್ದ ಟ್ರಾಪ್ ಪ್ರಕರಣದಲ್ಲಿ ಸದರಿ ಸಹಾಯಕ ಸರ್ಕಾರಿ ಅಭಿಯೋಜಕರು ರೂ. 4500 ಲಂಚದ ಹಣವನ್ನು ಪಿರ್ಯಾದುದಾರರಿಂದ ಸ್ವೀಕರಿಸುತ್ತಿದ್ದಾಗ ಲಂಚದ ಹಣದೊಂದಿಗೆ ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿ ಹಾಕಿಕೊಂಡಿದ್ದು ಆ ಮೂಲಕ ಸದರಿ ಸಹಾಯಕ ಸರ್ಕಾರಿ ಅಭಿಯೋಜಕರು ಲಂಚದ ಹಣವನ್ನು ಸ್ವೀಕರಿಸಿರುವುದು ರುಜುವಾತಾಗಿರುವುದರಿಂದ ಅವರನ್ನು ಬಂಧಿಸಿ ನಂತರ, ಜಾಮೀನಿನ ಮೇಲೆ ಬಿಡುಗಡೆಯಾಗಿರುತ್ತದೆಂದು ತಿಳಿಸಿರುತ್ತಾರೆ. ಹಾಗೂ ಸದರಿ ಅಧಿಕಾರಿಯವರ ವಿರುದ್ಧ ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರದಲ್ಲಿ ಮೊಕದ್ದಮೆ ಸಂಖ್ಯೆ:5:06 ಕಲಂ 7,13(1)(ಬಿ) ಸಹ ಕಲಂ 13(2) ಲಂಚ ನಿಷೇದ ಕಾಯ್ದೆ 1988ರ ಅಡಿಯಲ್ಲಿ ಪ್ರಕರ ದಾಖಲಿಸುವುದಾಗಿ ವರದಿ ಮಾಡಿರುತ್ತಾರೆ. ಆ ಕಾರಣ ಸದರಿ ಅಧಿಕಾರಿಯವರನ್ನು ಕೆ.ಸಿ.ಎಸ್. (ಸಿಸಿಎ) 1957 ನಿಯಮ 10ರ ಪ್ರಕರಣ ಮೇಲ್ಕಂಡಂತೆ ಅಪರಾ ಎಸಗಿದ್ದು ಬಂಧನಕ್ಕೆ ಒಳಗಾದ ದಿನಾಂಕ:24.4.06 ರಿಂದ ಅಮಾನತ್ತಿನಲ್ಲಿಡುವಂತೆ ಕೋರಿರುತ್ತಾರೆ. ಹಾಗೂ ಇದರ ಲೀನನ್ನು ಸಹ ಬೇರೆ ಕಡೆ ವರ್ಗಾಯಿಸಲು ಕ್ರಮ ಕೈಗೊಳ್ಳುವಂತೆ ತಿಳಿಸಿರುತ್ತಾರೆ. ಸದರಿ ವರದಿಯನ್ವಯ ಹಾಗೂ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಲಾಗಿ ಸದರಿ ಸಹಾಯಕ ಸರ್ಕಾರಿ ಅಭಿಯೋಜಕರವರು ಲಂಚ ನಿರೋಧ ಕಾನೂನು ಕಲಂ 7,13(1)(ಡಿ) ರೆ.ವಿ. 13(2) ರ ರೀತ್ಯಾ ಅಪರಾಧ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ. ಆದ್ದರಿಂದ ಶ್ರೀ ಎಂ.ಎಂ. ಸತ್ತಿಗೇರಿ, ಸಿಜೆ.(ಕಿವಿ) ಜೆಎಂಎಫ್‌ಸಿ ನ್ಯಾಯಾಲಯ, ಕೋಲಾರ ಇವರನ್ನು ಸದರಿ ಸಹಾಯಕ ಸರ್ಕಾರಿ ಅಭಿಯೋಜಕರು ಹುದ್ದೆಯಲ್ಲಿ ಮುಂದುವರೆಯುವುದು ಸಮಂಜಸವಿರುವುದಿಲ್ಲ. ಆದ್ದರಿಂದ ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆ ಬಾಕಿಯಿರಿಸಿ ಅವರನ್ನು ಅಮಾನತ್ತಿನಲ್ಲಿಡುವುದು ಅಪೇಕ್ಷಣೀಯವೆಂದು ಕಂಡು ಬಂದಿದ್ದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ:ಡಿಪಿಎನ್:ಸಿಶಾ:1:15:2006-07, ಬೆಂಗಳೂರು, ದಿನಾಂಕ: 3ನೇ ಮೇ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ ಶ್ರೀ ಎಂ.ಎಂ. ಸತ್ತಿಗೇರಿ ಸಿಜೆ (ಕಿ.ವಿ.) ಜೆಎಂಎಫ್‌ಸಿ ನ್ಯಾಯಾಲಯ, ಕೆ.ಜಿ.ಎಫ್. ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 10(1)(ಎ)ರ ನಿಯಮದ ಅಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿಯಿರಿಸಿ ಅವರನ್ನು ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಇವರು ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಶ್ರೀ ಎಂ.ಎಂ. ಸತ್ತಿಗೇರಿ ಇವರು ಸಕ್ಷಮ ಪ್ರಾಧಿಕಾರದ ಅನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

**ಆರ್.ಜೆ. ದೇಸಾಯಿ**

ಪಿ.ಆರ್. 883

ನಿರ್ದೇಶಕರು,

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು.

## ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು-1

### ಅಧಿಸೂಚನೆ

**ಸಂಖ್ಯೆ:ಆಸಾನಿ:34:ಆಡಳಿತ-3:2001, ದಿನಾಂಕ: 5ನೇ ಮೇ 2006**

**ವಿಷಯ:** ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ ಪ್ರಕಾರ ಕ್ರಮ ಜರುಗಿಸುವ ಬಗ್ಗೆ ಸೂಚನೆಗಳು.

**ಉಲ್ಲೇಖ:** ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (2005 ಕೇಂದ್ರ ಕಾಯ್ದೆ ಸಂಖ್ಯೆ: 22)

ರಾಜ್ಯದಲ್ಲಿ ನಾಗರೀಕರಿಗೆ ಮಾಹಿತಿ ಪಡೆಯುವ ಅವಕಾಶದ ಹಕ್ಕಿಗಾಗಿ ಒಂದು ಶಾಸನವನ್ನು ರಚಿಸುವುದು ಅಗತ್ಯವೆಂದು ಮನಗಂಡು “ಮಾಹಿತಿ ಪಡೆಯಲು ಅಧಿನಿಯಮ 2005” (2005ರ ಕೇಂದ್ರ ಕಾಯ್ದೆ ಸಂಖ್ಯೆ:22) ಅನ್ನು ಜಾರಿಗೊಳಿಸಲಾಗಿದೆ. ಈ ಅಧಿನಿಯಮವನ್ನು ದಿನಾಂಕ:

21.6.2005ರ ಭಾರತ ಸರ್ಕಾರದ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಲಾಗಿತ್ತು, ಆ ಅಧಿನಿಯಮದ ಪ್ರಕಾರ ರಾಜ್ಯ ಸರ್ಕಾರದ ಎಲ್ಲಾ ಇಲಾಖೆಗಳಲ್ಲಿ ಕ್ರಮ ಜರುಗಿಸಬೇಕಾಗಿದೆ. ಈ ಅಧಿನಿಯಮದ ಪ್ರಾಧಿಕಾರ ಆಯಾ ಕಚೇರಿ/ಸಂಸ್ಥೆಗಳನ್ನು ಸಾರ್ವಜನಿಕ ಪ್ರಾಧಿಕಾರಿಗಳೆಂದು ಗುರುತಿಸಿ ಸದರಿ ಅಧಿನಿಯಮ ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆಯಾ ಕಚೇರಿ/ಸಂಸ್ಥೆಗಳಿಗೆ "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 5(2)ರ ಅಡಿಯಲ್ಲಿ "ಸಹಾಯಕ ಸಾರ್ವಜನಿಕ ಮಾಹಿತಿ" ಅಧಿಕಾರಿ ಎಂದು ನೇಮಕ ಮಾಡಬೇಕಾಗಿದೆ.

ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಆಡಳಿತ ವ್ಯಾಪ್ತಿಗೆ ಒಳಪಡುವ ಈ ಕೆಳಕಂಡ ಸಂಸ್ಥೆಗಳನ್ನು ಮಾಹಿತಿ ಹಕ್ಕು ಪಡೆಯಲು ಅಧಿನಿಯಮ 2005ರ ಸೆಕ್ಷನ್ 2(4) ರನ್ವಯ 'ಸಾರ್ವಜನಿಕ ಪ್ರಾಧಿಕಾರ' ಎಂದು ಗುರುತಿಸಬೇಕಾಗಿದೆ. ಸದರಿ ಸಂಸ್ಥೆಗಳಲ್ಲಿ 'ಸಾರ್ವಜನಿಕ ಮಾಹಿತಿ ಅಧಿಕಾರಿ' ಹಾಗೂ 'ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ' ಗಳನ್ನು ಗುರುತಿಸಲಾಗಿದೆ. ಅದೇ ರೀತಿ ಅಧಿನಿಯಮದ ಸೆಕ್ಷನ್ 19(1)ರ ಅಡಿಯಲ್ಲಿ ಅಧಿನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು ಆಯಾ ಸಂಸ್ಥೆಗಳಲ್ಲಿ ಮೇಲ್ಮನವಿ ಪ್ರಾಧಿಕಾರ ಎಂದು ಗುರುತಿಸಲಾಗಿದೆ.

| ಕ್ರ. ಸಂ. | ಸಂಸ್ಥೆಗಳು (ಸಾರ್ವಜನಿಕ ಪ್ರಾಧಿಕಾರ) | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 1. | ನಿರ್ದೇಶಕರ ಕಚೇರಿ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು. | ಎಲ್ಲಾ ಜಂಟಿ ನಿರ್ದೇಶಕರು ಮತ್ತು ಆಡಳಿತಾಧಿಕಾರಿಗಳು | ಸಂಬಂಧಿಸಿದ ವಿಭಾಗದ ಉಪ ನಿರ್ದೇಶಕರು | ನಿರ್ದೇಶಕರು |
| 2. | ಎಲ್ಲಾ 27 ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಗಳು | ಎಲ್ಲಾ 27 ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು | ಸಹಾಯಕ ನಿರ್ದೇಶಕರು | ನಿರ್ದೇಶಕರು |

**ಜಿ. ಪ್ರಕಾಶಂ**
ನಿರ್ದೇಶಕರು,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ.

**Public Information Officer**

A) Joint Director incharge of the concerned technical Division will be Public Information Officers in so far as the technical matters are concerned.

| | | | |
|---|---|---|---|
| 1) | Joint Director | Agricultural Statistics Division, 4th Floor, M.S. Building, Bangalore-1 | Ph: 2235 3870 |
| 2) | Joint Director | PTC Division, 4th Floor, M.S. Building, Bangalore1 | Ph: 2235 3856 |
| 3) | Joint Director | Crop Insurance Scheme, 4th Floor, M.S. Building, Bangalore-1 | Ph: 2225 7405 |
| 4) | Joint Director | State Income, Industries, Prices: Co-ordination Planning, 6th Floor, M.S. Building, Bangalore-1 | Ph: 2235 3827 |
| 5) | Joint Director | Agricultural Census, Rainfall & Computers, 6th Floor, M.S. Building, Bangalore-1 | Ph: 2235 3751 |
| 6) | Joint Director | Civil Registration, National Sample Survey & Local Body Statistics | Ph: 2286 9741 |

B) The Administrative Officer will be the Public Information Officers in so far as Administration and Accounts matter are concerned.

C) The District Statistical Officer will be the Public Information Officers in so far technical and administrative matter concerned to the District Office.

**G. PRAKASAM**
Director
Director of Economics & Statistics Bangalore-560 001

**ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ವಿಳಾಸ ಪಟ್ಟಿ**

1. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
2ನೇ ಮಹಡಿ, ಅಂಜುಮನ್ ಬಿಲ್ಡಿಂಗ್,
ಸಂಗೊಳ್ಳಿ ರಾಯಣ್ಣ ರಸ್ತೆ,
ಡಿ.ವಿ.ಸಿ. ಕಚೇರಿ ಎದುರು,
ಬೆಳಗಾಂ 590 016

2. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಕಲೆಕ್ಟೋರೇಟ್ ಬಳ್ಳಾರಿ 583 101.

3. ಜಿಲ್ಲಾ ಸಂಖ್ಯಾ ಸಂಗ್ರಹಾಧಿಕಾರಿಗಳು,
ತಾಲ್ಲೂಕು ಕಚೇರಿ ಬಿಲ್ಡಿಂಗ್, 1ನೇ ಮಹಡಿ ಬಲಭಾಗ,
ಬೀದರ್.

4. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
2ನೇ ಮಹಡಿ, ಮುನಿಸಿಪಲ್ ಸಿ.ಟಿ.ಎಸ್. ನಂ.7,
182 ಸಿ ದರಬಾರ್ ಪ್ರೌಢಶಾಲೆಯ ಹತ್ತಿರ, ಬಿಜಾಪುರ.

5. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಅಂಡೇ ಛತ್ರ ರಸ್ತೆ,
ಚಿಕ್ಕಮಗಳೂರು 577 101.

6. ಜಿಲ್ಲಾ ಸಂಖ್ಯಾ ಸಂಗ್ರಹಾಧಿಕಾರಿಗಳು,
ಸ್ಕೌಟ್ ಮತ್ತು ಗೈಡ್ ಬಿಲ್ಡಿಂಗ್,
ಚಿತ್ರದುರ್ಗ 577 501

7. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಕೇ/ಆಫ್, ಡಾ. ಬಿ.ಕೆ. ವಿಶ್ವನಾಥ, ಕಲ್ಯಾಣಿರಾಮ್ ಪ್ಯಾಲೇಸ್,
ಕೊಟ್ಟಾರ, ಮಂಗಳೂರು-575 006 (ದಕ್ಷಿಣ ಕನ್ನಡ ಜಿಲ್ಲೆ)

8. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
2ನೇ ಮಹಡಿ, ಮಿನಿ ವಿಧಾನ ಸೌಧ,
ಜಿಲ್ಲಾಧಿಕಾರಿಗಳ ಕಚೇರಿ, ಹತ್ತಿರ, ಧಾರವಾಡ 580 008.

9. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ವಿಕಾಸ ಭವನ, ಮಿನಿ ವಿಧಾನ ಸೌಧ,
ರೂಂ ನಂ.20-ಬಿ, 2ನೇ ಮಹಡಿ, ಗುಲ್ಬರ್ಗಾ 585 101.

10. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ನಂ.1273, ರೇಸ್ ಕೋರ್ಸ್ ರಸ್ತೆ, ಮಿಷನ್ ಆಸ್ಪತ್ರೆ, ಹತ್ತಿರ
ಹಾಸನ 573 201.

11. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಜಿಲ್ಲಾ ಚಿಕಿತ್ಸಾ ಕೊಠಡಿ
ಜಿಲ್ಲಾಧಿಕಾರಿಗಳ ಕಚೇರಿ ಆವರಣ, ಕೋಲಾರ 563 101.

12. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಜಿಲ್ಲಾ ಚಿಕಿತ್ಸಾ ಕೊಠಡಿ
ಜಿಲ್ಲಾಧಿಕಾರಿಗಳ ಕಚೇರಿ ಆವರಣ ಕೋಟೆ,
ಮಡಿಕೇರಿ 571 201.

13. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ನಂ.1177, ಬಿ.ಎಂ.ಎಸ್. ಕಾಂಪ್ಲೆಕ್ಸ್ ಎಂ.ಸಿ. ರಸ್ತೆ
(ಕಾವೇರಿ ವನದ ಮುಂಭಾಗ) ಬಂದೀಗೌಡ ಬಡಾವಣೆ,
ಮಂಡ್ಯ 571 401.

14. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ನಂ.1197, ಬಾಲಕೃಷ್ಣರಾವ್ ರಸ್ತೆ,
ಮೈಸೂರು 570 005.

15. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಮುನಿಸಿಪಲ್ ನಂ.1-50-80
ಐ.ಬಿ. ರಸ್ತೆ, ಸ್ಟೇಷನ್ ಏರಿಯಾ ರಾಯಚೂರು-584 101.

16. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
2ನೇ ಮಹಡಿ (ಬಲಭಾಗ) ಜಿಲ್ಲಾಧಿಕಾರಿಗಳ ಕಚೇರಿ ಕಟ್ಟಡ
ಶಿವಮೊಗ್ಗ 577 201.

17. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಮಿನಿ ವಿಧಾನ ಸೌಧ, ಜಿಲ್ಲಾಧಿಕಾರಿಗಳ ಕಚೇರಿ ಆವರಣ
2ನೇ ಮಹಡಿ, ತುಮಕೂರು 572 102

18. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಮಿನಿ ವಿಧಾನ ಸೌಧ,
ಜಿಲ್ಲಾಧಿಕಾರಿಗಳ ಕಛೇರಿ ಆವರಣ ಕಾರವಾರ 581 301

19. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ನಂ.324, ಶ್ರೀ ವಿನಾಯಕ ಕಾಂಪ್ಲೆಕ್ಸ್, 2ನೇ ಮಹಡಿ,
2ನೇ ಮುಖ್ಯರಸ್ತೆ, (ಪಿ.ಜಿ. ಬಡಾವಣೆ) ದಾವಣಗೆರೆ.

20. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಜಿಲ್ಲಾ ಆಡಳಿತ ಭವನ, ಮಿನಿ ವಿಧಾನ ಸೌಧ,
ಹೊಸಪೇಟೆ ರಸ್ತೆ ಕೊಪ್ಪಳ.

21. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಸ್ಟಾರ್ ಮಂಜಿಲ್, ಎಲ್.ಈ.ಸಿ. ಹಿಂಭಾಗ ರಸ್ತೆ,
ಅಜ್ಜರ ಕಾಡು, ಉಡುಪಿ.

22. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
2ನೇ ಮಹಡಿ, ಮಲ್ಲಿಕಾರ್ಜುನ ಮಳಿಗೆ,
ಬಿ.ಆರ್. ಹಿಲ್ಸ್ ರಸ್ತೆ ಚಾಮರಾಜನಗರ 571 313.

23. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಶ್ರೀಮತಿ ಶಾಂತಾಬಾಯಿ ಬಲರಾಮ್ ನಾಯಕ್‌ರವರ ಕಟ್ಟಡ,
ಎಕ್ಸ್‌ಟೆನ್ಷನ್ ಏರಿಯಾ, ಬಾಗಲಕೋಟೆ 587 101.

24. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಕೆ.ಟಿ. ಮೇಹರವಾಡೆ ಬಿಲ್ಡಿಂಗ್ ಕುರಟ್ಟಿ ಪೇಟೆ,
ಬೆಟಗೇರಿ ಗದಗ್ 582 101

25. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಜಿಲ್ಲಾಡಳಿತ ಸಂಕೀರ್ಣ (ನೆಲಮಹಡಿ) ದೇವಗಿರಿ,
ಹಾವೇರಿ ಜಿಲ್ಲೆ, ಹಾವೇರಿ 531 110.

26. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಬೆಂಗಳೂರು ನಗರ ಜಿಲ್ಲೆ ನಂ.280, 17ನೇ ಸಿ ಕ್ರಾಸ್,
ಸಿದ್ದಗಂಗಾ ಮಠ ಬಿಲ್ಡಿಂಗ್ ಭಾಷ್ಯಂ ಸರ್ಕಲ್ ಹತ್ತಿರ,
ರಾಜಾಜಿನಗರ, ಬೆಂಗಳೂರು 560 010.

27. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,
ಬೆಂಗಳೂರು (ಗ್ರಾಮಾಂತರ ಜಿಲ್ಲೆ) ನಂ.280,
17ನೇ ಸಿ ಕ್ರಾಸ್, ಸಿದ್ದಗಂಗಾ ಮಠ ಬಿಲ್ಡಿಂಗ್,
ಭಾಷ್ಯಂ ಸರ್ಕಲ್ ಹತ್ತಿರ, ರಾಜಾಜಿನಗರ,
ಬೆಂಗಳೂರು - 560 010.

**ಜಿ. ಪ್ರಕಾಶಂ**
ನಿರ್ದೇಶಕರು,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ.

ಪಿ.ಆರ್. 881

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ಎಲ್.ಎನ್.ಡಿ. (ಎನ್) ಸಿ.ಆರ್. 216/05-06, ದಿನಾಂಕ: 29ನೇ ಏಪ್ರಿಲ್ 2006**

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಕೆರೆಗುಡ್ಡದಹಳ್ಳಿ ಗ್ರಾಮದ ಸ.ನಂ. 8ರ ಪೈಕಿ 0.07 ಗುಂಟೆ ಜಮೀನನ್ನು ರಸ್ತೆಗಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ:ಎಲ್.ಎನ್.ಡಿ:ಸಿ.ಆರ್:33/05-06, ದಿನಾಂಕ: 27.9.2005.

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಮೇದರಹಳ್ಳಿ ಗ್ರಾಮದ ಸ.ನಂ. 9/16 ರಲ್ಲಿ 3.00 ಎಕರೆ ಜಮೀನಿಗೆ ಎ.ಯೋಗನಂದ ಎಂಬುವವರು ಮಾಲೀಕತ್ವ ಹೊಂದಿದ್ದು ಖಾತೆದಾರರು ಸಹ ಆಗಿರುತ್ತಾರೆ. ಸದರಿ ಜಮೀನಿಗೆ ಹೊಂದಿಕೊಂಡಂತೆ ಯಶವಂತಪುರ ಹೋಬಳಿ, ಕೆರೆಗುಡ್ಡದಹಳ್ಳಿ ಗ್ರಾಮದ ಸ.ನಂ.8ರ ಸರ್ಕಾರಿ ಗೋಮಾಳದಲ್ಲಿ 0.07 ಗುಂಟೆ ಜಮೀನನ್ನು ಮೇದರಹಳ್ಳಿ ಗ್ರಾಮದ ಸ.ನಂ. 9/16 ರ ಹಿಡುವಳಿ ಜಮೀನಿಗೆ ರಸ್ತೆಗಾಗಿ ಉಪಯೋಗಿಸುತ್ತಿದ್ದು ಈ ಜಮೀನಿಗೆ ರಸ್ತೆ ಸಂಪರ್ಕಕ್ಕಾಗಿ ಬೇರೆ ಜಮೀನು ಇರುವುದಿಲ್ಲವಾದ್ದರಿಂದ ಸದರಿ ಜಮೀನನ್ನು ರಸ್ತೆಗಾಗಿ ಕಾಯ್ದಿರಿಸಬೇಕೆಂದು ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಉಲ್ಲೇಖದ ಪತ್ರದಲ್ಲಿ ವರದಿ ನೀಡಿರುತ್ತಾರೆ.

ತಹಶೀಲ್ದಾರ್ ವರದಿಯಂತೆ ಕೆರೆಗುಡ್ಡದಹಳ್ಳಿ ಗ್ರಾಮದ ಸ.ನಂ. 8ರ ಪೈಕಿ 0.07 ಗುಂಟೆ ಜಮೀನನ್ನು ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ರ ಕಲಂ 71ರ ಪ್ರಕಾರ ಕಾಯ್ದಿರಿಸಲು ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಕೆರೆಗುಡ್ಡದ ಹಳ್ಳಿ ಗ್ರಾಮದ ಸ.ನಂ. 8ರ ಪೈಕಿ 0.07 ಗುಂಟೆ ಜಮೀನನ್ನು ಮೇದರಹಳ್ಳಿ ಗ್ರಾಮದ ಸ.ನಂ. 9/16 ಮತ್ತು ಇದಕ್ಕೆ ಹೊಂದಿಕೊಂಡಿರುವ ಇತರೆ ಜಮೀನುಗಳಿಗೆ ಸಂಬಂಧಿಸಿದಂತೆ ರಸ್ತೆಗಾಗಿ ಉಪಯೋಗಿಸಲು ನಕ್ಷೆಯಲ್ಲಿರುವಂತೆ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 71ರ ಪ್ರಕಾರ ಕಾಯ್ದಿರಿಸಿದೆ.

**ಷರತ್ತುಗಳು**

1. ಸದರಿ ರಸ್ತೆಯನ್ನು ಇದಕ್ಕೆ ಲಗತ್ತಾಗಿರುವ ಇತರೆ ಎಲ್ಲಾ ಜಮೀನುಗಳಿಗೆ ಸಾರ್ವಜನಿಕರ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2. ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕುರವರು ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.
3. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ರದ್ದುಪಡಿಸಲಾಗುವುದು.
4. ಈ ರಸ್ತೆಯ ನಿರ್ವಹಣೆಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 884

## ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ:** ಸಮಾಪನೆಗೊಂಡಿರುವ ದಾವಣಗೆರೆ ಇಂಡ್‌ಸ್ಟ್ರಿಯಲ್ ಟೂಲ್ಸ್ ಅಂಡ್ ಅಕ್ಸೇರಿಸ್ ಪ್ರೊಡಕ್ಷನ್ ಅಂಡ್ ಸೇಲ್ಸ್ ಕೋ-ಆಫ್ ಸೊಸೈಟಿ ಲಿ. ದಾವಣಗೆರೆ ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಪುನಃಶ್ಚೇತನಗೊಳಿಸಲು ಆದೇಶಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿ ಸಮಸಂಖ್ಯೆ ಆದೇಶ ದಿ: 18.11.2005.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರ ಪತ್ರ ಸಂ. ಸನಿ 31/ಎಲ್‌ಕ್ಯೂಡಿ/ಸಿಆರ್-17/2005-06 ದಿ:20.4.2006.
3. ಸಮಾಪನಾಧಿಕಾರಿಗಳು ದಾವಣಗೆರೆ ಇಂಡ್‌ಸ್ಟ್ರಿಯಲ್ ಟೂಲ್ಸ್ ಅಂಡ್ ಸೇಲ್ಸ್ ಕೋ-ಆಫ್ ಸೊಸೈಟಿ ಲಿ. ದಾವಣಗೆರೆ ಇವರ ಪತ್ರ ದಿ:17.4.2006.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಆದೇಶದ ರೀತ್ಯಾ ಸಮಾಪನೆಗೊಳಿಸಿ ಹಾಗೂ ಶ್ರೀ ಎನ್.ಜಿ. ರುದ್ರಪ್ಪ ದ್ವಿ.ದ.ಸ. ದಾವಾ ಶಾಖೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕಛೇರಿ ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ. ದಿನಾಂಕ: 26.3.2006 ರಂದು ಕೆ. ಅಬ್ದುಲ್ ರೆಹಮಾನ್ ಇವರ ಅಧ್ಯಕ್ಷತೆಯಲ್ಲಿ ಜರುಗಿದ ಸಂಘದ ಸರ್ವಸದಸ್ಯರ ಸಭೆಯಲ್ಲಿ ರೂಪಿಸಿಕೊಂಡಿರುವ 5 ವರ್ಷಗಳ ಕ್ರಿಯಾಯೋಜನೆಯ ರೀತ್ಯಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂಘವನ್ನು ಮುಂದುವರಿಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಸರ್ವಾನುಮತದಿಂದ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನಿಸಿರುತ್ತಾರೆ. ಉಲ್ಲೇಖ (2) ಮತ್ತು (3)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರು ಹಾಗೂ ಸಂಘದ ಸಮಾಪನಾಧಿಕಾರಿಗಳು ಮುಂದುವರಿಸಿಕೊಂಡು ಹೋಗಲು ಅವಕಾಶ ಮಾಡಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ. ಈ ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಅನುಮತಿ ನೀಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ನಂ:ಡಿಆರ್/ಡಿವಿಜಿ/ಸಮಾಪನೆ/ಸಿಆರ್-51/2001-02, ದಿನಾಂಕ: 23ನೇ ಏಪ್ರಿಲ್ 2006**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69: ಸಿಎಲ್‌ಎಮ್:2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ಜಿಲ್ಲೆ, ಸಹಕಾರ ಸಂಘಗಳ ಉಪ ನಿಬಂಧಕರು, ಕೆ.ಎಂ.ಆಶಾ ಆದ ನಾನು ದಾವಣಗೆರೆ ಇಂಡ್‌ಸ್ಟ್ರಿಯಲ್ ಟೂಲ್ಸ್ ಅಂಡ್ ಅಕ್ಸೇರಿಸ್ ಪ್ರೊಡಕ್ಷನ್ ಅಂಡ್ ಸೇಲ್ಸ್ ಕೋ-ಆಫ್ ಸೊಸೈಟಿ ಲಿ. ದಾವಣಗೆರೆ ಇದರ ಉಲ್ಲೇಖ (1)ರ ಸಮಾಪನಾದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

ಪುನಃಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾ ಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗೆ ಸೂಚಿಸಿದೆ ಹಾಗೂ ನೂತನ ಆಡಳಿತ ಮಂಡಳಿಯನ್ನು ಶ್ರೀ ಆರ್ ವೆಂಕಟೇಶ್ ದ್ವಿ.ದ.ಸ. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕಛೇರಿ ದಾವಣಗೆರೆ ಇವರನ್ನು ಚುನಾವಣಾಧಿಕಾರಿಯಾಗಿ ನೇಮಿಸಲಾಗಿದೆ. ಈ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮೊಹರಿನೊಂದಿಗೆ ದಿನಾಂಕ: 25.4.2006 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 885

## ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡವಳಿ

**ಉಪಸ್ಥಿತರು:** ಶ್ರೀ ಆರ್. ರಾಜಶೇಖರ್
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಎಂವೈಜಿ-5858 (ಹೆಚ್‌ಜಿವಿ) ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** ವಾಹನ ಮಾಲೀಕರು ಶ್ರೀ ಡಿ.ಎಂ. ಪಟೇಲ್ ಬಿನ್ ಎಂ.ಆರ್. ಪಟೇಲ್, ಚಿಕ್ಕಮಗಳೂರು ಇವರ ಅರ್ಜಿ ದಿನಾಂಕ: 24.2.06.

ವಾಹನ ಸಂ: ಎಂವೈಜಿ-5858 (ಹೆಚ್‌ಜಿವಿ) ವಾಹನದ ನೊಂದಾಯಿತ ಮಾಲೀಕರಾದ ಶ್ರೀ ಡಿ.ಎಂ. ಪಟೇಲ್, ಬಿನ್ ಎಂ.ಆರ್. ಪಟೇಲ್, ಚಿಕ್ಕಮಗಳೂರು ಇವರು ಸದರಿ ವಾಹನದ ತೆರಿಗೆಯನ್ನು ದಿನಾಂಕ:28.2.2006 ರವರೆಗೆ ಪಾವತಿಸಿದ್ದು, ದಿ:24.2.2006 ರಂದು ಕಛೇರಿಗೆ ಸದರಿ ವಾಹನ ಎಲ್ಲಾ ದಾಖಲೆಗಳೊಂದಿಗೆ ಅರ್ಜಿ ನೀಡಿ ಈ ವಾಹನವು ಈಗ ಹಳೆಯದಾಗಿದ್ದು, ರಸ್ತೆಯಲ್ಲಿ ಓಡಿಸಲು ಅನರ್ಹವಾಗಿರುವುದರಿಂದ ಹಾಗೂ ದುರಸ್ಥಿ ದುಬಾರಿ ಆಗಿರುವುದರಿಂದ ನೊಂದಣಿ ರದ್ದುಪಡಿಸಬೇಕೆಂದು ಕೋರಿಕೆ ಸಲ್ಲಿಸಿರುತ್ತಾರೆ. ಮಾಲೀಕರ ಕೋರಿಕೆಯಂತೆ ಈ ವಾಹನದ ನೊಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂ: ಪ್ರಾಸಾಅ:ಚಿಮ:ಎಫ್‌ಟಿ:ಸಾರಿಗೆ:04-05/06, ದಿನಾಂಕ: 24ನೇ ಫೆಬ್ರವರಿ 2006**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು ವಾಹನ ಸಂ: ಎಂವೈಜಿ-5858 (ಹೆಚ್‌ಜಿವಿ) ವಾಹನದ ನೊಂದಣಿ ಹಾಗೂ ನೊಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡುಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ದರಿರುತ್ತಾರೆಂಬ ಷರತ್ತಿನ ಮೇಲೆ ನೊಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | | |
|---|---|---|---|
| 1. | ವಾಹನ ಸಂ | : | ಎಂವೈಜಿ-5858 |
| 2. | ವರ್ಗ | : | ಘನ ಸರಕು ವಾಹನ |
| 3. | ಚಾಸಿಸ್ | : | 344 002 3715705 |
| 4. | ಇಂಜಿನ್ ಸಂ | : | 692 ಡಿ 013715925 |
| 5. | ಮಾಡೆಲ್ | : | 1973 |
| 6. | ಹೆಚ್ ಪಿ ಎ | : | ಇಲ್ಲ |
| 7. | ಮಾಲೀಕರು | : | ಶ್ರೀ ಡಿ.ಎಂ. ಪಟೇಲ್ ಬಿನ್ ಎಂ.ಆರ್. ಪಟೇಲ್, ಬಸವನಹಳ್ಳಿ, ಚಿಕ್ಕಮಗಳೂರು. |

**ಆರ್. ರಾಜಶೇಖರ್**

ಪಿ.ಆರ್. 886 ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ ಚಿಕ್ಕಮಗಳೂರು ಇವರ ನಡವಳಿ**

**ಉಪಸ್ಥಿತರು:** ಶ್ರೀ ಆರ್. ರಾಜಶೇಖರ್
ನೊಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು.

**ವಿಷಯ:** CNG-4469 (S/C) ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ವಾಹನ ಮಾಲೀಕರ ಅರ್ಜಿ ದಿ: ಬಂದಿರುವುದಿಲ್ಲ
2. ಅಧ್ಯರ್ಪಣ ಸಂ: 27/91-92 ದಿ:31.10.91.
3. ಮೋಟಾರು ವಾಹನ ನಿರೀಕ್ಷಕರ ವರದಿ ದಿ:28.11.91.
4. ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ:ಒಸಾಇ:170:ಟಿಎಂಎ:2003, ದಿ:6.8.03.

ಈ ಕಛೇರಿಯ ದಾಖಲೆಗಳಂತೆ ವಾಹನ ಸಂ: CNG-4469 (S/C) ಇದರ ನೊಂದಾಯಿತ ಮಾಲೀಕರಾದ ಶ್ರೀ K. Ningappa, Ajjampura, Tarikere ರವರು ಸದರಿ ವಾಹನದ ತೆರಿಗೆಯನ್ನು ಈ ಕಛೇರಿಯಲ್ಲಿ ದಿ:30.11.91 ವರೆಗೆ ಪಾವತಿಸಿ ಮುಂದಿನ ತೆರಿಗೆಯಿಂದ ವಿನಾಯಿತಿ ಪಡೆಯಲು ಸದರಿ ಈ ವಾಹನದ ಅನುಪಯೋಗದ ಸ್ಥಳದ ಮಾಹಿತಿ ನೀಡಿ ಕಛೇರಿಗೆ ವಾಹನದ ಎಲ್ಲಾ ದಾಖಲೆ ಪತ್ರಗಳೊಂದಿಗೆ ಅಧ್ಯರ್ಪಣ ಸಂ:27/91-92 ರಲ್ಲಿ ದಿ:31.10.91 ರಿಂದ ಅಧ್ಯರ್ಪಣಕ್ಕೆ ಅರ್ಜಿ ನೀಡಿದ್ದು, ಅದರಂತೆ ಇಂದಿಗೂ ಅಧ್ಯರ್ಪಣ ಮುಂದುವರೆದಿದೆ. ಆದರೆ ವಾಹನ ಮಾಲೀಕರು ಅಧ್ಯರ್ಪಣ ದಿನಾಂಕದಿಂದ ಇಂದಿನವರೆವಿಗೂ ಸದರಿ ವಾಹನವನ್ನು ಅಧ್ಯರ್ಪಣದಿಂದ ವಾಹನ ಬಿಡುಗಡೆ ಮಾಡಿಸಿಕೊಂಡಿರುವುದಿಲ್ಲ. ವಾಹನ ಬಿಡುಗಡೆ ಮಾಡಿಸಿಕೊಳ್ಳಲು ಹಾಗೂ ವಾಹನದ ನೊಂದಣಿ ರದ್ದುಪಡಿಸಲು ಅರ್ಜಿ ನೀಡುವಂತೆ ಕಛೇರಿಯಿಂದ ವಾಹನ ಮಾಲೀಕರಿಗೆ ಹಲವು ಬಾರಿ ತಿಳುವಳಿಕೆ ನೀಡಿದರೂ ಅರ್ಜಿ ಸಲ್ಲಿಸಿರುವುದಿಲ್ಲ. ಆರ್‌ಸಿ ರದ್ದುಪಡಿಸಲು ಉಲ್ಲೇಖ (3)ರ ವರದಿಯಲ್ಲಿ ಮೋವಾನಿರವರು ಶಿಫಾರಸ್ಸು ಮಾಡಿದ್ದಾರೆ. ಆದ್ದರಿಂದ ಉಲ್ಲೇಖ (4)ರಲ್ಲಿ ಸೂಚಿಸಿದ ಸರ್ಕಾರದ ಅಧಿಸೂಚನೆಯ ಸೂಚನೆಗಳಂತೆ ಈ ವಾಹನದ ನೊಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂ: ಪ್ರಾಸಾಅ:ಚಿಮ:ಎಸ್‌ಆರ್:05-06, ದಿನಾಂಕ: 13ನೇ ಫೆಬ್ರವರಿ 2006**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು ವಾಹನ ಸಂ: CNG-4469 (S/C) ವಾಹನದ ನೊಂದಣಿ ಹಾಗೂ ನೊಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡುಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ದರಿರುತ್ತಾರೆಂಬ ಷರತ್ತಿನ ಮೇಲೆ ನೊಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | | |
|---|---|---|---|
| 1. | ವಾಹನ ಸಂ:ವರ್ಗ | : | CNG - 4469 (S/C) |
| 2. | ಮಾಡೆಲ್ | : | 1978 |
| 3. | ಚಾಸಿಸ್ ಸಂ | : | 344 050022324 |
| 4. | ಇಂಜಿನ್ ಸಂ | : | 692 D 03034115 |

| | | |
|---|---|---|
| 5. ತೆರಿಗೆ ದಿನಾಂಕ | : | 30.11.91 |
| 6. ಎಸ್ ಆರ್ ಸಂ | : | 27/91-92 SR wef:31.10.91 |
| 7. ಮಾಲೀಕರು | : | Ningappa s/o Kallappa, Prop.SRMS, Ajjampura, Tarikere tq, Chickmagalur (Dist). |

**ಆರ್. ರಾಜಶೇಖರ್**

ಪಿ.ಆರ್. 887 ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

## ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ ಚಿಕ್ಕಮಗಳೂರು ಇವರ ನಡವಳಿ

**ಉಪಸ್ಥಿತರು:** ಶ್ರೀ ಆರ್. ರಾಜಶೇಖರ್
ನೊಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು.

**ವಿಷಯ:** M Y D-8398 (AR) ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ವಾಹನ ಮಾಲೀಕರ ಅರ್ಜಿ ದಿ: ಬಂದಿರುವುದಿಲ್ಲ
2. ಅಧ್ಯರ್ಪಣ ಸಂ: 39/94-95 ದಿ:18.8.94.
3. ಮೋಟಾರು ವಾಹನ ನಿರೀಕ್ಷಕರ ವರದಿ ದಿ:28.9.02 ಆರ್‌ಸಿ ರದ್ದತಿಗೆ ಶಿಫಾರಸ್ಸು
4. ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ:ಒಸಾಇ:ಮಾಡಿರುತ್ತಾರೆ. 170:ಟಿಎಂಎ:2003, ದಿ:6.8.03.

ಈ ಕಛೇರಿಯ ದಾಖಲೆಗಳಂತೆ ವಾಹನ ಸಂ: MYD-8398 (AR) ಇದರ ನೊಂದಾಯಿತ ಮಾಲೀಕರಾದ ಶ್ರೀ Munna, K.M. Road, Kadur tq, C K M ರವರು ಸದರಿ ವಾಹನದ ತೆರಿಗೆಯನ್ನು ಈ ಕಛೇರಿಯಲ್ಲಿ ದಿ:31.7.2005 ವರೆಗೆ ಪಾವತಿಸಿ ಮುಂದಿನ ತೆರಿಗೆಯಿಂದ ವಿನಾಯಿತಿ ಪಡೆಯಲು ಸದರಿ ಈ ವಾಹನದ ಅನುಪಯೋಗದ ಸ್ಥಳದ ಮಾಹಿತಿ ನೀಡಿ ಕಛೇರಿಗೆ ವಾಹನದ ಎಲ್ಲಾ ದಾಖಲೆ ಪತ್ರಗಳೊಂದಿಗೆ ಅಧ್ಯರ್ಪಣ ಸಂ:39/94-95 ರಲ್ಲಿ ದಿ:18.8.94 ರಿಂದ ಅಧ್ಯರ್ಪಣಕ್ಕೆ ಅರ್ಜಿ ನೀಡಿದ್ದು, ಅದರಂತೆ ಇಂದಿಗೂ ಅಧ್ಯರ್ಪಣ ಮುಂದುವರೆದಿದೆ. ಆದರೆ ವಾಹನ ಮಾಲೀಕರು ಇಂದಿನವರೆವಿಗೂ ಸದರಿ ವಾಹನವನ್ನು ಅಧ್ಯರ್ಪಣದಿಂದ ವಾಹನ ಬಿಡುಗಡೆ ಮಾಡಿಸಿಕೊಂಡಿರುವುದಿಲ್ಲ. ವಾಹನ ಬಿಡುಗಡೆ ಮಾಡಿಸಿಕೊಳ್ಳಲು ಹಾಗೂ ವಾಹನದ ನೊಂದಣಿ ರದ್ದುಪಡಿಸಲು ಅರ್ಜಿ ನೀಡುವಂತೆ ಕಛೇರಿಯಿಂದ ವಾಹನ ಮಾಲೀಕರಿಗೆ ಹಲವು ಬಾರಿ ತಿಳುವಳಿಕೆ ನೀಡಿದರೂ ಅರ್ಜಿ ಸಲ್ಲಿಸಿರುವುದಿಲ್ಲ.

ಆದ್ದರಿಂದ ಉಲ್ಲೇಖ (4)ರಲ್ಲಿ ಸೂಚಿಸಿದ ಸರ್ಕಾರದ ಅಧಿಸೂಚನೆಯ ಸೂಚನೆಗಳಂತೆ ಈ ವಾಹನದ ನೊಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂ: ಪ್ರಾಸಾಅ:ಚಿಮ:ಎಸ್‌ಆರ್:05-06, ದಿನಾಂಕ: 13ನೇ ಫೆಬ್ರವರಿ 2006**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು ವಾಹನ ಸಂ: M Y D - 8398 (AR) ವಾಹನದ ನೊಂದಣಿ ಹಾಗೂ ನೊಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡುಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ದರಿರುತ್ತಾರೆಂಬ ಷರತ್ತಿನ ಮೇಲೆ ನೊಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1. ವಾಹನ ಸಂ:ವರ್ಗ | : | MYD-8398 (AR Cab) |
| 2. ಮಾಡೆಲ್ | : | 1967 |
| 3. ಚಾಸಿಸ್ ಸಂ | : | A 13311 T 4970 |
| 4. ಇಂಜಿನ್ ಸಂ | : | 1 A c 4 M 5005 |
| 5. ತೆರಿಗೆ ದಿನಾಂಕ | : | 31.7.95 |
| 6. ಎಸ್ ಆರ್ ಸಂ | : | 39/94-95 SR wef;18.8.94 |
| 7. ಮಾಲೀಕರು | : | Munna s/o Abdul Samar, K.M. Road, Kadur tq, Chickmagalur Dist. |

**ಆರ್. ರಾಜಶೇಖರ್**

ಪಿ.ಆರ್. 888 ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

## ಮುಖ್ಯ ಇಂಜಿನೀಯರರು, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ ಇವರ ಕಾರ್ಯಾಲಯದ ನಡುವಳಿಗಳು

**ವಿಷಯ:** ಧಾರವಾಡ ವಾಲ್ಮಿ ಆವರಣದಲ್ಲಿ ಕರ್ನಾಟಕ ಹೈಕೋರ್ಟಿನ ಸಂಚಾರಿ ಪೀಠ ಕಟ್ಟಡದ ನಿರ್ಮಾಣಕ್ಕಾಗಿ ಟೆಂಡರ್ ಪರಿಶೀಲನಾ ಸಮಿತಿ ರಚಿಸುವ ಕುರಿತು.

**ಉಲ್ಲೇಖ:** ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಆದ್ಯಾದೇಶ - 2000.

**ಪೀಠಿಕೆ:**

ಧಾರವಾಡದಲ್ಲಿ ಕರ್ನಾಟಕ ಹೈಕೋರ್ಟಿನ ಸಂಚಾರಿ ಪೀಠ ಸ್ಥಾಪನೆಗಾಗಿ ಕಟ್ಟಡ ನಿರ್ಮಾಣ ಕಾಮಗಾರಿಗಳಿಗಾಗಿ ಈಗಾಗಲೇ ರೂ: 6600.00 ಲಕ್ಷಗಳಿಗೆ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ಸರ್ಕಾರದ ಪತ್ರ ಸಂಖ್ಯೆ ಸಿಆಸುಇ-113-ಸೆಲುವ್ಯಾ-2005 ದಿನಾಂಕ: 20.2.2006 ಅಡಿ ಮಂಜೂರಾತಿ ದೊರೆತಿದೆ. ಸದರಿ ಕಾಮಗಾರಿ ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ, ಧಾರವಾಡ ಇವರ ಕಾರ್ಯಾಲಯದ ಟೆಂಡರ್ ನೋಟಿಫಿಕೇಶನ್ ಪತ್ರ ಸಂಖ್ಯೆ: ಇಇ:ಪಿಡಬ್ಲ್ಯೂಡಿ:ಧಾರವಾಡ:ಪಿಬಿ-2: ಹೈಕೋರ್ಟ್:ಟೆಂಡರ್:2006-07:17: ದಿನಾಂಕ: 5-4-2006 ಅಡಿ ಮೊತ್ತ ರೂ: 6000.00 ಲಕ್ಷಗಳಿಗೆ ಟೆಂಡರ್ ಕರೆಯಲಾಗಿದೆ.

ಟೆಂಡರ್ ಅಂಗೀಕರಿಸುವ ಪ್ರಾಧಿಕಾರವು ಕೆ ಟಿ ಪಿ ಪಿ ರೂಲ್ಸ್ 2000 ನಿಯಮ 20 ರಡಿ ಸೂಚಿಸಿರುವಂತೆ ಟೆಂಡರ್ ದಸ್ತಾವೇಜುಗಳ ಪರಿಶೀಲನೆ, ಟೆಂಡರ್ ತೆರೆಯುವ ಪ್ರಕ್ರಿಯೆಯ ಮೇಲ್ವಿಚಾರಣೆ, ಸ್ವೀಕೃತ ಟೆಂಡರ್‌ಗಳ ಪ್ರಾಥಮಿಕ ಪರಿಶೀಲನೆ ಹಾಗೂ ಗುತ್ತಿಗೆದಾರರ ಮೌಲ್ಯಮಾಪನ ವರದಿಯನ್ನು ಟೆಂಡರ್ ಅಂಗೀಕರಿಸುವ ಪ್ರಾಧಿಕಾರದ ಪರಿಗಣನೆಗೆ ಒಪ್ಪಿಸುವ ಕೆಲಸವನ್ನು ನಿರ್ವಹಿಸಬೇಕಾಗಿದೆ.

ಇದಲ್ಲದೆ, ಗುತ್ತಿಗೆ ಮೊತ್ತ ರೂ: 5.00 ಕೋಟಿಗಳಿಗಿಂತ ಹೆಚ್ಚಿಗೆಯಾದಲ್ಲಿ, ಟೆಂಡರ್ ಅಂಗೀಕರಿಸುವ ಪ್ರಾಧಿಕಾರ ಟೆಂಡರ್ ಪರಿಶೀಲನಾ ಸಮಿತಿಯನ್ನು ರಚಿಸುವ ಅಗತ್ಯವಿರುತ್ತದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಮುಖ್ಯ ಇಂಜಿನೀಯರ್‌ರವರ ಕಾರ್ಯಾಲಯ,**
**ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ**

**ಆದೇಶ ನಂ:ಸಿಇಎನ್:ತಾಂಸ-1:ಸಂಇ-1:ಸಂಚಾರಿಪೀಠ:2006-07:00717, ದಿನಾಂಕ: 2ನೇ ಮೇ 2006**

ಮೇಲೆ ಪೀಠಿಕೆಯಲ್ಲಿ ವಿವರಿಸಿರುವಂತೆ, ಧಾರವಾಡ ವಾಲ್ಮಿ ಆವರಣದಲ್ಲಿ ಕರ್ನಾಟಕ ಹೈಕೋರ್ಟಿನ ಸಂಚಾರಿ ಪೀಠದ ಕಟ್ಟಡ ನಿರ್ಮಾಣದ ಟೆಂಡರ್ ಪ್ರಕ್ರಿಯೆಯನ್ನು ನಿರ್ವಹಿಸಲು ಈ ಕೆಳಗೆ ನಮೂದಿಸಿರುವ ಅಧಿಕಾರಿಗಳನ್ನೊಳಗೊಂಡ ಟೆಂಡರ್ ಪರಿಶೀಲನಾ ಸಮಿತಿಯನ್ನು ರಚಿಸಲಾಗಿದೆ.

1. ಶ್ರೀ ಎ.ಎನ್. ಜಾನ್ವೇಕರ್ - ಅಧ್ಯಕ್ಷರು
   ಅಧೀಕ್ಷಕ ಇಂಜಿನಿಯರರು, ಲೋಕೋಪಯೋಗಿ ವೃತ್ತ, ಧಾರವಾಡ.
2. ಶ್ರೀ ಎಂ.ಎನ್. ರಾಮಚಂದ್ರ - ಸದಸ್ಯರು
   ಉಪಮುಖ್ಯ ಇಂಜಿನೀಯರರು-II, ಕೇಂದ್ರ ಕಾರ್ಯಾಲಯ, ಧಾರವಾಡ.
3. ಶ್ರೀ ಜಿ.ಎಸ್. ನಾರಾಯಣಮೂರ್ತಿ - ಸದಸ್ಯರು
   ಉಪಮುಖ್ಯ ಇಂಜಿನೀಯರರು-I, ಕೇಂದ್ರ ಕಾರ್ಯಾಲಯ, ಧಾರವಾಡ.
4. ಶ್ರೀ ಸಿ.ಆರ್. ಬಳ್ಳಾರಿ, - ಸದಸ್ಯರು
   ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ವಿಭಾಗ, ಹಾವೇರಿ.
5. ಶ್ರೀ ಬಿ.ಎಸ್. ಪಠಾಣ, - ಸದಸ್ಯರು
   ಲೆಕ್ಕಾಧಿಕಾರಿಗಳು, ಕೇಂದ್ರ ಕಾರ್ಯಾಲಯ, ಧಾರವಾಡ.
6. ಶ್ರೀ ಎಸ್.ಎಸ್. ಸೂಳೆಗಾಂವಿ, - ಸದಸ್ಯರು
   ತಾಂತ್ರಿಕ ಸಹಾಯಕರು-1, ಕೇಂದ್ರ ಕಾರ್ಯಾಲಯ, ಧಾರವಾಡ
7. ಶ್ರೀ ಕೃಷ್ಣಾಜಿ, ಚವ್ಹಾಣ, - ಸದಸ್ಯ-ಕಾರ್ಯದರ್ಶಿಗಳು
   ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ವಿಭಾಗ, ಧಾರವಾಡ.

ಮುಖ್ಯ ಇಂಜಿನೀಯರರು,
ಪಿ.ಆರ್. 889 ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ.

**ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನಡವಳಿಕೆಗಳು**

**ವಿಷಯ:** ಸ್ಥಗಿತಗೊಂಡಿರುವ ಕಾಮಧೇನು ಹಣ್ಣು ಹೂ ಮತ್ತು ತರಕಾರಿ ಬೆಳೆಗಾರರ ಮಾರಾಟ ಮತ್ತು ಸಂಸ್ಕರಣ ಸಹಕಾರ ಸಂಘ ನಿಯಮಿತ, ಚೇಳೂರು ಗುಬ್ಬಿ ತಾಲ್ಲೂಕು ಈ ಸಂಘದ ಸಮಾಪನೆ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ:169:ಸಿಸಿಎಲ್‌ಎಂ:2001 ದಿನಾಂಕ:21.11.2001.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ:ಸನಿತು:32: ಡಿಎಲ್‌ಎಸ್:51:2003-04 ದಿನಾಂಕ: 20.6.03.
3. ಈ ಕಛೇರಿ ನೋಟೀಸ್ ಸಮಸಂಖ್ಯೆ ದಿ:31.7.03 ಮತ್ತು 8.2.2005.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಕಾಮಧೇನು ಹಣ್ಣು ಹೂ ಮತ್ತು ತರಕಾರಿ ಬೆಳೆಗಾರರ ಮಾರಾಟ ಮತ್ತು ಸಂಸ್ಕರಣ ಸಹಕಾರ ಸಂಘ ನಿಯಮಿತ, ಚೇಳೂರು, ಗುಬ್ಬಿ ತಾಲ್ಲೂಕು ಈ ಸಂಘವು 1998-99ನೇ ಸಾಲಿನಿಂದ ಸ್ಥಗಿತಗೊಂಡಿದ್ದು ವಾರ್ಷಿಕ ಮಹಾಸಭೆಗಳು ಮತ್ತು ಆಡಳಿತ ಮಂಡಳಿ ಸಭೆಯನ್ನು ನಡೆಸದೆ ಇರುವುದರಿಂದ ಸಂಘವನ್ನು ಸಮಾಪನೆಗೊಳಿಸುವಂತೆ ಕೋರಿ ಸಹಾಯಕ ನಿಬಂಧಕರು ತುಮಕೂರು ಇವರು ಉಲ್ಲೇಖ (2)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಉಲ್ಲೇಖಿತ (3)ರ ಈ ಕಛೇರಿ ನೋಟೀಸ್ ದಿನಾಂಕ: 31.7.2003 ಮತ್ತು 8.2.2005 ಇವುಗಳನ್ನು ಸಂಘದ ಕಾರ್ಯದರ್ಶಿ ಹಾಗೂ ಆಡಳಿತ ಮಂಡಳಿ ಸದಸ್ಯರುಗಳ ಸಹಾಯಕ ನಿಬಂಧಕರು, ತುಮಕೂರು ಇವರ ಮೂಲಕ ಜಾರಿ ಮಾಡಿಸಿ ಸ್ವೀಕೃತಿ ಪಡೆಯಲಾಗಿದೆ.

ಮೇಲ್ಕಂಡ ನೋಟೀಸುಗಳು ಸಂಘದ ಆಡಳಿತ ಮಂಡಳಿ ಸದಸ್ಯರು ಮತ್ತು ಕಾರ್ಯದರ್ಶಿಯವರಿಗೆ ಜಾರಿಯಾಗಿದ್ದು ಇವರುಗಳು ಇದುವರೆವಿಗೂ ಸಂಘವನ್ನು ಸಮಾಪನೆಗೊಳಿಸುವ ಕ್ರಮಕ್ಕೆ ಯಾವುದೇ ಆಕ್ಷೇಪಣೆ ಸಲ್ಲಿಸಿರುವುದಿಲ್ಲ. ನೋಟೀಸಿನಲ್ಲಿ ತಿಳಿಸಲಾಗಿದ್ದ ಆರೋಪಗಳಿಗೆ ಇವರುಗಳ ಯಾವುದೇ ಆಕ್ಷೇಪಣೆಗಳು ಇಲ್ಲವೆಂದು ಭಾವಿಸಿದೆ. ಹಾಗೂ ಸದರಿ ಆರೋಪಗಳಿಗೆ ಇವರ ಒಪ್ಪಿಗೆ ಇದೆ ಎಂದು ಪರಿಗಣಿಸಿದೆ. ಮೇಲಿನ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ನಂ:ಡಿಆರ್‌ಬಿ:ಎಲ್‌ಕ್ಯೂಡಿ:13:2003-04, ದಿನಾಂಕ: 27ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ಹಾಗೂ ಉಲ್ಲೇಖಿತ (1)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಆರ್. ಲಿಂಗರಾಜು, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಸ್ಥಗಿತಗೊಂಡಿರುವ ಕಾಮಧೇನು ಹಣ್ಣು ಹೂ ಮತ್ತು ತರಕಾರಿ ಬೆಳೆಗಾರರ ಮಾರಾಟ ಮತ್ತು ಸಂಸ್ಕರಣಾ ಸಹಕಾರ ಸಂಘ ನಿಯಮಿತ, ಚೇಳೂರು, ಗುಬ್ಬಿ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 73 (1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಗುಬ್ಬಿ ಇವರನ್ನು ಸಂಘದ ಸಮಾಪನಾಧಿಕಾರಿಯಾಗಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಸಂಘದ ಕಾರ್ಯದರ್ಶಿ ಅಥವಾ ಪ್ರಭಾರ ಹೊಂದಿರುವ ಯಾವುದೇ ವ್ಯಕ್ತಿಯಿಂದ ಪಡೆದುಕೊಳ್ಳತಕ್ಕದ್ದು. ಸಂಘದ ಆಸ್ತಿಜವಾಬ್ದಾರಿ ಅನ್ವಯ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಅನುಮೋದನೆ ಪಡೆದುಕೊಂಡು ಕಾಯಿದೆ ಮತ್ತು ನಿಯಮಾನುಸಾರ ಶೀಘ್ರವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವು ಕೂಡಲೇ ಜಾರಿಗೆ ಬರುತ್ತದೆ. ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 27.4.2006 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್. 892 ತುಮಕೂರು ಜಿಲ್ಲೆ, ತುಮಕೂರು.